ಸಂಗೀತ

# ಗಜರಾ

## ನಾಟಕವು



ಶ್ರೀ॥ ನಾರಾಯಣ ಕೃಷ್ಣ ಹಂಪಿಹೊಳಿ ಬಿ. ಎ.,

ಇವರಿಂದ ವಿರಚಿಸಲ್ಪಟ್ಟಿತು.

೧೯೨೬.

ಬೆಲೆ ೧ ರು. ] [ Price Re. 1



ಸಂಗೀತ

# ಗಜರಾ

## ನಾಟಕವು



ಮೊದಲನೇ ಆವೃತ್ತಿ-೧೦೦೦ ಪ್ರತಿಗಳು.

ಶ್ರೀ॥ ನಾರಾಯಣ ಕೃಷ್ಣ ಹಂಪಿಹೊಳಿ ಬಿ. ಎ.,

ಇವರಿಂದ ವಿರಚಿಸಲ್ಪಟ್ಟಿತು.





೧೯೨೬.

ಬೆಲೆ ೧ ರು. ] [ Price Re. 1

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.
ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ, ಧಾರವಾಡ.

# ಸಮರ್ಪಣವು.

—— :o: ——

ಕವಿಗಳೆನ್ನುವರೆಲ್ಲ ನುಡಿಯ ಬಟ್ಟೆಗಳಿಂದ ।
ಸವನಾದ ಶಬ್ದಗಳನಾರಿಸುತ ಹೊಂದಿಸುತ ।
ಕವನವೆನ್ನುವ ಗೋಡೆಗಳನು ಕಟ್ಟುತ ಧನ್ಯವಾದವಂ
ಸಲೆಪಡೆಯಲಿ ॥

ಜವದಿಂದೆ ಸಂತತವು ಝರಿಯುತಿಹ ಹೊಳೆಯುತಿಹ ।
ಕವನಗಳನಿರ್ಝರವೊಯೇನೆಂಬ ವಾಣಿಯಿಹ ।
ಕವಿರಾಜ **ನರಸಿಂಹಶರ್ಮ ಕಾವ್ಯಾನಂದರಿಗೆ**
ಕೃತಿಯನರ್ಪಿಸಿಹೆನು ॥ ೧ ॥

**ಗ್ರಂಥಕರ್ತಾ.**




ವಾಚಕರಮುಂದೆ ಇಟ್ಟಂಥ ಈ ಚಿಕ್ಕ ಪುಸ್ತಕವು, ಎಷ್ಟೋ ಅಸನು ಕೂಲತೆಗಳ ಮೂಲಕ ಇಂದಿನವರೆಗೆ ಪ್ರಕಾಶಿಸಲ್ಪಡಲಿಲ್ಲ. ಇದು ಸನ್ ೧೯೧೮ನೇ ಇಸ್ವಿಯಲ್ಲಿ ಬರೆಯಲ್ಪಟ್ಟಿತು. ಆತ್ಮವಿಶ್ವಾಸವಿಲ್ಲದೆ, ಇದರ ಲೇಖಕನು ಇದನ್ನು ಯಾರಿಗೂ ತೋರಿಸದೆ ಬಚ್ಚಿಟ್ಟಿದ್ದನು. ಆದರೆ ಅವನ ಬಾಲಮಿತ್ರರೂ, ಆಗ್ಗೆ ಸಹಾಧ್ಯಾಯಿಗಳೂ, ಆದ, ಶ್ರೀ॥ ಶಾಮಸುಂದರ ನರಸಿಂಹಾಚಾರ್ಯ ಪುಣೇಕರ ಇವರು ಅದನ್ನು ಹೊರದೆಗೆದು, ಓದಿನೋಡಿ, ಮದ್ರಾಸ, ಸುಗುಣವಿಲಾಸಸಭೆಯ ಕನ್ನಡ ಭಾಗದ ನಾಟಕಗಳ ಪಂದ್ಯಾಟಕ್ಕೆ ಈ ಪುಸ್ತಕವನ್ನು ಕಳಿಸಹಚ್ಚಿದರು. ಆ ಪಂದ್ಯಾಟದಲ್ಲಿ ಈ ನಾಟಕವು ಯಶಸ್ವಿಯಾಗಿ ಬಂದಿತು. ಇದಕ್ಕಾಗಿ ಸುಗುಣವಿಲಾಸಸಭೆಯ ಪರೀಕ್ಷಕರಿಗೂ, ಮತ್ತು ಅಲ್ಲಿಗೆ ಕಳಿಸಲಿಕ್ಕೆ ಸ್ಫೂರ್ತಿಯನ್ನು ಕೊಟ್ಟ ಶಾಮಸುಂದರ ಪುಣೇಕರ ಇವರಿಗೂ ಈ ಲೇಖಕನು ತುಂಬಾ ಋಣಿಯಾಗಿದ್ದಾನೆ.

ಮುಂದೆ ಈ ಪುಸ್ತಕವು ಏನೂ ಗತಿಗಾಣದೆ ಎಷ್ಟೋ ಕೈಗಳೊಳಗೆ ಆಡ್ಡಾಡಿ ಬಂದಿತು. ಕಡೆಗೆ, ಶ್ರೀ॥ ಎಸ್. ಎಸ್. ಬಸವನಾಳ, ಎಂ, ಎ. ಮತ್ತು ಶ್ರೀ॥ ಎಚ್. ಎಫ್. ಕಟ್ಟೀಮನಿ ಬಿ ಏ, ಇವರು ಈ ಪುಸ್ತಕವನ್ನುಕಂಡು, ಇದರಮೇಲೂ ಮತ್ತು ಇದರ ಲೇಖಕನಮೇಲೂಕನಿಕರಬಟ್ಟು ತಮ್ಮ ಪ್ರಬೋಧವೆಂಬ ಮಾಸಪತ್ರಿಕೆಯಲ್ಲಿ ಹಾಕಹತ್ತಿದರು. ಅದೇ ಈಗ ಪುಸ್ತಕ ರೂಪವಾಗಿ ಪ್ರಸಿದ್ಧಿಸಲ್ಪಟ್ಟಿದೆ. ಅಚ್ಚುಹಾಕುವದಕ್ಕಿಂತ ಮೊದಲು, ಶ್ರೀ॥ ನರಸಿಂಹಾಚಾರ್ಯ ಪುಣೇಕರ, ಕಾವ್ಯಾನಂದ, ಇವರನೇತೃತ್ವದ ಕೆಳಗೆ ಪುನಃ ಈ ಪುಸ್ತಕವು ಪರಿಶೋಧಿಸಲ್ಪಟ್ಟಿತು. ಇವರಿಂದಲೂ ಮತ್ತು

ಪ್ರಬೋಧದ ಸಂಪಾದಕರಾದ, ಶ್ರೀ॥ ಎಸ್. ಎಸ್. ಬಸವನಾಳ ಮತ್ತು ಶ್ರೀ॥ ಎಚ್. ಎಫ್. ಕಟ್ಟೀಮನಿ ಇವರೀರ್ವರಿಂದಲೂ, ತನಗಾದ ಉಪಕಾರವನ್ನು ಈ ಲೇಖಕನು, ಕೇವಲ ಶಬ್ದಗಳಿಂದ ಹೇಳಲಾರನು.

ಕಡೆಯದಾದರೂ ಇನ್ನೊಂದು ಮಹತ್ವದ ಮಾತೇನಂದರೆ ಧಾರವಾಡದ "ಕರ್ನಾಟಕ ಯುವಕರ ವಾಙ್ಮಯ ಮತ್ತು ಆ ಮೆಟ್ಟಾದ ನಾಟ್ಯಸಮಾಜದವರು" ಈ ನಾಟಕವನ್ನು ಒಮ್ಮೆ ರಂಗಭೂಮಿಯ ಮೇಲೆ ತಂದರು. ಇವರದಾದರೂ ಆಭಾರವನ್ನು ಮನ್ನಿಸದೆ ಈ ಲೇಖಕನು ಉಳಿಯಲಾರನು.

ಧಾರವಾಡ.<br>ತಾ॥ ೧೨-೭-೧೯೨೭

ಲೇಖಕ<br>ನಾರಾಯಣ ಕೃಷ್ಣ ಹಂಪಿಹೊಳಿ






## ನಾಂದೀ.

(ರಾಗ. ಹಮೀರ. " ಹೀವಿನತಿ ಪದಕಮುಲಾ " ಎಂಬಂತೆ)

ಈ ನಮನಂ ಶಶಿಧರಗೆ। ಈ ಗಲನೀಲಗೆ ಭುಜಗಭೂಷಣಗೆ।
ನಟವರಗೆ ನಮನಂ ॥ ಪಲ್ಲ ॥

ವ್ಯಾಪಿಸಿ ಲೋಕವ। ರೂಪ ತೋರದೆ। ಈಪರಿ ಲೀಲಾಶತ ಮಾಳ್ಪ
ನಿಗೆ ॥ ೧ ॥

ದುರಿತ ನಿವಾಕರ। ಕರುಣದೆಮ್ಮಗಳಂ। ನೆರೆ ಭವದೊಳು ದಾಂಟಿಸು
ಜಗದೀಶಾ ॥ ೨ ॥

ನೀಡೋ ಶ್ರೇಯಸನು। ಜೋಡಿಸಿಕರಗಳ। ಬೇಡುವೆವತಿಲೀನತೆ
ಯಿಂದೀಶಾ ॥ ೩ ॥

( ಆಮೇಲೆ ಸೂತ್ರಧಾರನು ಬರುತ್ತಾನೆ. )

ಸೂತ್ರಧಾರ:—ಮೈತ್ರೇಯಾ, ಇತ್ತಬಾ.

ಸೇವಕ:—( ಒಳಗೆಬಂದು ) ದೇವರು ಅಪ್ಪಣೆಯಾಗಬೇಕು.

ಸೂ.:—ಹಂಪಿಹೊಳಿ ನಾರಾಯಣನು ಬರೆದ " ಗಜರಾ " ಎಂಬ ನವೀನ ನಾಟಕವನ್ನು ಪ್ರಯೋಗಿಸಬೇಕೆಂದು ರಸಿಕರಾದ ವಿದ್ವಾಂಸರ ಅಪ್ಪಣೆಯಾಗಿರುವದು. ಆದ್ದರಿಂದ, ನಿಮ್ಮ ನಿಮ್ಮ ಪಾತ್ರಗಳನ್ನು ಚನ್ನಾಗಿ ಸಿದ್ಧಗೊಳಿಸಿರೆಂದು ನಟವರ್ಗಕ್ಕೆ ಹೇಳು.

ಸೇ.:—ದೇವರು, ಅಪ್ರಸಿದ್ಧನಾದ ಯಾವದೋ ಒಂದು ನಾಟಕದ ಪ್ರಯೋಗವೇಕೆ? ಸರ್ವಮಾನ್ಯರಾದ ಕವಿಗಳು ಬರೆದ ಎಷ್ಟೋನಾಟಕ ಗಳುಂಟು.

ಸೂ.:—ಮೈತ್ರೇಯಾ, ಗಜರಾ ಎಂಬ ನಾಟಕವು ಅಪ್ರಸಿದ್ಧವೆಂದು ಹೀಯಾಳಿಸಬೇಡ. ಸಾಮಾನ್ಯ ಜನರೊಳಗೆ ಯಾವದಾದರೊಂದು ನವೀನ ವಸ್ತುವು ಪ್ರಸಿದ್ಧಿಗೆ ಬರುವ ರೀತಿಯೇ ವಿಚಿತ್ರವಾಗಿರುವದು. ಒಬ್ಬ ಸ್ತ್ರೀ

ಪಾಠಕನು ಸಿಕ್ಕರೆ ಸಾಕು; ಒಂದು ಕ್ಷುದ್ರ ವಸ್ತುವು ಸಹ ಕೀರ್ತಿಯನ್ನು ಪಡೆಯುವದು; ಸ್ತುತಿಪಾಠಕನಿಲ್ಲದಿದ್ದರೆ ಮಾತ್ರ ಉತ್ತಮ ವಸ್ತುವು ಕೂಡಾ ಮೂಲಿಗುಂಪಾಗುವದು. ನೋಡು:—

ಕಂದ ॥ ಅರಸಂಚಿಯುತಾಂ ಪೊಗಳಿರೆ ।
ಪಿರಿದಾದುದು ಬಿಸದಕೀರ್ತಿಭುವನತ್ರಯದೋಳ್ ॥
ಇರದಿರೆನುತಿಪರನೋರ್ವಂ ।
ಜರಿವರ್ ಗೊಂಜಾಳತುದಿಯ ಪೊಳೆವೆಸಳುಗಳಂ ।೧॥

ಅದ್ದರಿಂದ ಗಜರಾ ಎಂಬ ನಾಟಕದ ಪ್ರಯೋಗವನ್ನು, ಸಾಮಾನ್ಯ ಜನರ ಮುಂದೆ ಮಾಡದೆ, ಅದನ್ನು ರಂಗಭೂಮಿಯಮೇಲೆ ತರಹೇಳಿದಂಥ, ಸಾಹಿತ್ಯಸಂಗೀತಕಲಾನಿಪುಣರಾದ, ದೊಡ್ಡ ದೊಡ್ಡ, ವಿದ್ವಾಂಸರ ಸಮಕ್ಷಮೇ ಮಾಡಬೇಕಾಗಿದೆ. ಇಂಥ ಮಹನೀಯರು, ನಾಳಿಗೆ ಹೊಸ ಪೇಟೆಯಲ್ಲಾಗುವ ಕರ್ನಾಟಕ ಸಾಹಿತ್ಯ ಸಮ್ಮೇಲನದಲ್ಲಿ ನೆರೆಯುವರು. ಅದ್ದರಿಂದ ನಾವು ನಮ್ಮ ನಾಟಕ ಮಂಡಲವನ್ನು ತಕ್ಕೊಂಡು ಅಲ್ಲಿಗೆ ಹೋಗುವಾ.

ಸೇ.:—ಒಳ್ಳೇದು. ಹಿರಿಯರ ಅಪ್ಪಣೆಯಾದಂತೆ ಎಲ್ಲ ಕಾರ್ಯವನ್ನು ನಾನು ನೆರವೇರಿಸುವೆನು.

ಸೂ.:—ಮೈತ್ರೇಯಾ. ಇಷ್ಟೇ ಅಲ್ಲ. ಹೊಸಪೇಟೆಯಹತ್ತರಿರುವ ವಿಜಯನಗರದ ಹಾಳು ಪಟ್ಟಣದಲ್ಲಿ ಪುರಾತನಕಾಲದ ದೇವಾಲಯಗಳೂ, ಅರಮನೆಗಳೂ, ಪ್ರೇಕ್ಷಣೀಯವಾಗಿರುತ್ತವೆ. ಅವೆಲ್ಲವುಗಳನ್ನು ಕಣ್ಣಾರೆ ನೋಡುವ ಪ್ರಸಂಗವು ಅನಾಯಾಸವಾಗಿ ದೊರೆತಂತಾಗುವದು.

( ತೆರೆಯಲ್ಲಿ )

ಪ್ರಾಣನಾಥಾ ನಾನೂ ಬರುತ್ತೇನೆ. ಬಿಟ್ಟು ಹೋಗಬೇಡಿರಿ.

ಸೂ.:—ಮೈತ್ರೇಯಾ, ಇವಳಾರೋ? ಮತ್ತಕೋಕಿಲೆಯಂತೆ ಕಮಲಮಧುರವಾಗಿ ನಾನೂ ಬರುವೆನೆಂದು ಹಾರೈಸುವಳು?

ಸೇ.:—( ಧ್ಯಾನಿಸಿ ) ಹಾ! ಒಡಿಯರೇ ಈಗ ತಿಳಿಯಿತು. ಇವಳು ನೆರಮನೆಯ ವಸಂತರಾಯನ ಹೆಂಡತಿಯಾದ ಗಜರಾಬಾಯಿಯು. ವಸಂತರಾಯನು ವಿಜಯನಗರದ ಹಾಳು ಪಟ್ಟಣವನ್ನು ನೋಡಲಿಕ್ಕೆ ಹೋಗುವಾಗ ನಾನೂ ಬರುವೆನೆಂದು ಹಟಹಿಡಿದಿರುವಳು. ಒಡಿಯರೇ. ಇತ್ತ ಬನ್ನಿರಿ. ನಾವು ಹೋಗೋಣ.

( ಇಬ್ಬರೂ ಹೋಗುತ್ತಾರೆ. )

# ೧ ನೇ ಅಂಕ.

## ೧ನೇ ಪ್ರವೇಶ.

—:০:—

ಸ್ಥಳ—ವಸಂತರಾಯನ ಮನೆ. ( ಗಜರೆಯೂ ವಸಂತರಾಯನೂ ಬರುತ್ತಾರೆ. )

ಗಜರಾ:— ( " ಖರಾತೋಪ್ರೇವಾ " ಎಂಬಂತೆ )

ಬರುವೆನು ನಾಥಾ ನಿಮ್ಮಯ ಸಂಗಡದಿ ।
ತೊರೆಯದಿರೆನ್ನನು ನೀವ್ । ನಾಥಾ ನಿಮ್ಮಯಸಂಗಡದಿ ॥ ಪ ॥

ನೆಳಲಿನಂದದಿ ನಿಮ್ಮ। ಬಳಿಯೊಳಿರ್ದವಳನು ।
ಬಳಲಿಸಿ ಪೋಗುವಿರಾ । ನಾಥಾ—॥ ೧ ॥

ಹೃದಯ ಪಾಶಳಿಂದೆನ್ನ। ಮುದದಿ ಲಾಲಿಸಿವುನ್ನ।
ಕವಲಿಸೀಡಾಡುವಿರಾ । ನಾಥಾ—॥ ೨ ॥

ವಸಂತ:—ಗಜರಾ, ನೀನು ಹೀಗೆ ಹಟಹಿಡಿಯಬೇಡ. ವಿಜಯನಗರದ ಹಾಳು ಪಟ್ಟಣದಲ್ಲಿ ಸ್ತ್ರೀಯರಿಗೆ ರಮ್ಯ ಕಾಣಿಸುವಂಥಾದ್ದೇನೂ ಇಲ್ಲ. ಆದ್ದರಿಂದ ನೀನು ಬಾರದಿರುವದು ವಿಹಿತವು.

ಗಜರಾ:—ಆಹಾ! ನನ್ನನ್ನು ವಂಚಿಸುವಿರೇನು ? ನಾನೂ ಸುಶಿಕ್ಷಿತಳು, ಇತಿಹಾಸಜ್ಞಳು ಪ್ರವಾಸಿಕರೂ, ಇತಿಹಾಸಕಾರರೂ, ಬರೆದದ್ದು ನಿಜವಾದರೆ ವಿಜಯನಗರದಲ್ಲಿ ಯಾವದು ರಮ್ಯವಲ್ಲ? ಪಂಪಾ ಕ್ಷೇತ್ರವೋ? ತುಂಗಭದ್ರೆಯ ತಟಾಕವೋ? ಹಾಳುಪಟ್ಟಣವೋ? ಯಾವದು ?

ವಸಂತ—( ತನ್ನಷ್ಟಕ್ಕೆ ) ಇದೇನು ? ನಾನು ನಿರುತ್ತರನಾಗುವ ಪ್ರಸಂಗವು ಬಂದಿತು! ಸ್ತ್ರೀಯರಿಗೆ ಸ್ವಲ್ಪ ಸ್ವಾತಂತ್ರ್ಯವನ್ನು ಕೊಟ್ಟರೆ ಸಾಕು. ಅದರ ಮೊದಲಿನ ಉಪಯೋಗವೇನಂದರೆ, ಗಂಡಂದಿರಿಗೆ ಎದುರುತ್ತರವನ್ನು ಕೊಡುವದು. ನೋಡಿರಿ! ತಾನು ಸುಶಿಕ್ಷಿತಳೆಂಬ ಅಭಿಮಾನವೆಷ್ಟು? ತಾನು ಇತಿಹಾಸ ಓದಿದವಳೆಂಬ ಅಹಂಕಾರವೆಷ್ಟು? "ವಿಜಯನಗರದಲ್ಲಿ ಯಾವದು ರಮ್ಯವಲ್ಲ." ಎಂದು ನನ್ನನ್ನೇ ತಿರುಗಿ ಪ್ರಶ್ನಮಾಡುವಳು! ಛೀ! ಛೀ! ಇವಳನ್ನು ನಾನು ಮದುವೆಯಾದದ್ದು ದೊಡ್ಡ ತಪ್ಪಾಯಿತು. ಇವಳು ಸುಶಿಕ್ಷಿತಳೆಂಬ ಭ್ರಮೆಗೆ ನಾನು ಗುರಿಯಾದೆನು. ಇವಳ ಒಬ್ಬ ಹಿತಚಿಂತಕನೆನಿಸುವ ಸಂಜೀವರಾಯನೆಂಬವನ ಬಣ್ಣದ ಮಾತಿಗೆ ಮರುಳಾಗಿ ಇವಳ ಕೈಪಿಡಿದೆನು. ಇರಲಿ, ಆದದ್ದು ಆಗಿಹೋಯಿತು. ಇನ್ನು

ಮುಂದೆ ಈಕೆಯ ಅಧಿಕಾರವು ನನ್ನ ಮೇಲೆ ನಡಿಯುಬಾರದಾಗಿದ್ದರೆ ವಿಜಯನಗರಕ್ಕೆ ಇವಳನ್ನು ನಾನು ಎಂದೂ ಬರಗೊಡಬಾರದು. ಇದು ಸೌಮ್ಯ ಉಪಾಯುಗಳಿಂದ ಸಾಧಿಸುವ ಹಾಗಿದ್ದರೆ ನೋಡೋಣ, ( ಪ್ರಕಾಶವಾಗಿ ) ಗಜರಾ, ವಿಜಯನಗರದಲ್ಲಿ ಎಲ್ಲವೂ ಪ್ರೇಕ್ಷಣೀಯವಿದ್ದರೂ ನಿನ್ನಂಥ ಕೋಮಲಾಂಗಿಯು ಬರಲಿಕ್ಕೆ ತಕ್ಕಸ್ಥಳವಲ್ಲ. ಅಲ್ಲಿಯ ಹವೆ-ನೀರುಗಳು ರೋಗಗ್ರಸ್ತವಾಗಿರುವವು. ಮೇಲಾಗಿ ಈ ಜೇಸಿಗೆಯ ಕಾಲದಲ್ಲಿ ಪ್ರವಾಸವು ಶ್ರಮಕಾರಕವಾದ್ದು.

ಗಜರಾಃ—ಇಂಥ ತೊಂದರೆಗಳು ನನಗೂ ನಿಮಗೂ ಸಾಮಾನ್ಯವಾಗಿರುವವು. ಅಂದಮೇಲೆ ನನ್ನನ್ನು ಯಾಕೆ ಬಿಟ್ಟು ಹೋಗಬೇಕು.

ವಸಂತಃ—ಕೊಮಲಾಂಗಿ, ಇಂಥ ತೊಂದರೆಗಳು ನನಗೂ ನಿನಗೂ ಒಂದೇ ಹೇಗಾದಾವು!

( " ಭಾಸಮುಲಾ ಜಾಹಲಾ " ಎಂಬಂತೆ. )

ಲತೆಯೊಳಿರ್ದ ಮಾರ್ದವವನು ತರುವು ತಳೆವುದೇನೇ ।
ಅಥವಾ ತರುಕಾಠಿಣ್ಯವು ಲತೆಗೆಬರುವದೇ ॥ ಪಲ್ಲ ॥

ಮಳೆಗುಡುಗುಗಳೊಡನೆ ಮೋಡ। ವಿಳಿಯುತಲಿರಲಂಜಿ ಲತೆಯು॥
ಎಳೆಯಚಿಗರುಗಳನು ಚಾಚಿ ನೀರೆ ತರುವನಪ್ಪಿಕೊಳ್ವದ್ಹೀಗೆ ॥೧॥

( ಗಜರೆಯನ್ನು ಅಪ್ಪಿಕೊಳ್ಳುತ್ತಾನೆ ) ಆದ್ದರಿಂದ ನಿನಗೆ ಪ್ರೀತಿಪುರಸ್ಸರವಾದ ಆಗ್ರಹದಿಂದ ಹೇಳಿಕೊಳ್ಳುತ್ತೇನೆ; ನೀನು ಬಾರದಿರುವದು ಒಳ್ಳೇದು.

ಗಜರಾ—ನಾನು ಬಾರದಿದ್ದರೆ ನಿಮ್ಮ ಸೇವೆಯನ್ನು ಯಾರು ಮಾಡುವವರು? ನಿಮಗೆ ಹ್ಯಾಗೆ ಬಿಸಿಲು ಗಾಳಿಗಳಿಂದ ನನ್ನ ಮೈಬಣ್ಣವು ಕಂದಬಾರದೆಂಬ ಚಿಂತೆ ಇರುವದೋ, ಹಾಗೆಯೇ ನನಗಾವರೂ ಇರುವದು.

ವಸಂತ—ಪ್ರಿಯೇ, ಸೇವೆಯನ್ನು ಮಾಡಬೇಕೆಂದು ನೀನು ನನ್ನ ಮನೆಗೆ ಬಂದವಳಲ್ಲ. ನಾನು ಎಂದೂ ಹಾಗೆ ಮಾಡಗೊಡಲಿಕ್ಕಿಲ್ಲ. ನಿನ್ನಂಥ ಸುಂದರಿಯಾದ ಹೆಂಗಳೆಯನ್ನು ಪುಷ್ಪದಂತೆ ಪಾಲಿಸುವದು ನನ್ನ ಕರ್ತವ್ಯವಾಗಿರುವದು ಕಂಡಿಯಾ?

ಗಜರಾ:—ಅದು ಏನೇ ಇರಲಿ; ವಿಜಯನಗರಕ್ಕೆ ಮಾತ್ರ ನನ್ನನ್ನು ಬಿಟ್ಟು ಹೋಗಬೇಡಿರಿ, ನಾನೊಬ್ಬಳೇ ಇಲ್ಲಿ ಇರಲಾರೆನು.

ವಸಂತ—ಗಜರಾ, ನಿನಗೆ ಇಷ್ಟು ಹೇಳಿದರೂ ತಿಳಿಯಬಾರದೆ? ನೀನು ನನ್ನ ಕೂಡ ಬರಬೇಡ. ಸ್ವಲ್ಪ ದಿವಸಗಳಲ್ಲಿಯೇ ನಾನು ತಿರುಗಿ ಬರುವೆನು.

ಗಜರಾ:—ನೀವು ಎಂದೇ ಬರವೊಲ್ಲಿರೇಕೆ; ನಾನು ಮಾತ್ರ ನಿಮ ಕೂಡ ಬರುವವಳೇ.

ವಸಂತ:—ಗಜರಾ, ನಾನು ಹೇಳುವ ಮಾತು ಸುಮ್ಮನೆ ಕೇಳು; ನೀನು ಬರಬೇಡ.

ಗಜರಾ:—ನಾನು ಬಿಡಲಾರೆನು; ಬರುವವಳೇ.

ವಸಂತ—(ತನ್ನಷ್ಟಕ್ಕೆ) ಛೀ! ಛೀ! ಈ ದುರ್ಮುಖಿಯ ಹಟಮಾರಿತನಕ್ಕೆ ಎಣೆಯಿಲ್ಲ. ನನ್ನ ಕೂಡ ನನ್ನ ಸ್ನೇಹಿತರು ಇಬ್ಬರು ಬರುವವರಿರುವರು. ಇವಳು ಬಂದರೆ ನಮ್ಮ ಸ್ವಚ್ಛಂದ ಆಚರಣೆಯೆಲ್ಲ ಸಂಕುಚಿತವಾಗುವದು. ಆದ್ದರಿಂದ ಇವಳು ಅಜ್ಜೆ ಮಾಡಲಿ; ಹಟಹಿಡಿಯಲಿ; ಸಿಟ್ಟಿಗೇಳಲಿ; ಏನೇಮಾಡಲಿ; ಇವಳನ್ನು ಬಿಟ್ಟು ಹೋಗುವದು ನಿಶ್ಚಯ. ಅಥವಾ ಸಿಟ್ಟಿಗೆದ್ದು ಮಾಡುವದಾದರೂ ಏನು? ತಿರುಗಿ ಬಂದಮೇಲೆ ಒಂದೆರಡು ದಿವಸ ಕೆಲಸಬೊಗಸೆಗಳನ್ನು ಮಾಡದೆ ಎಲ್ಲಿಯಾದರೂ ಮೂಲೆಯಲ್ಲಿ ಕೂತಾಳು. ಇದಕ್ಕೂ ಹೆಚ್ಚಿನದೇನಾದೀತು; ಆಗ್ಗೆ ನಾನಾದರೂ ಇವಳ ಗೊಡವೆಗೆ ಹೋಗದಿದ್ದರಾಯಿತು. ಅಹಂಕಾರಕ್ಕೆ ಉದಾಸೀನವೇ ಮಟ್ಟ (ಪ್ರಕಾಶವಾಗಿ) ಗಜರೇ ಇನ್ನೊಮ್ಮೆ ಸ್ಪಷ್ಟವಾಗಿ ಹೇಳುವೆನು; ನೀನು ಬರಬೇಡ (ಗಜರೆಯು ಅಳಹತ್ತುತ್ತಾಳೆ.) ಆಹಾ! ಈ ಸೋಗಲಾಡಿತನವನ್ನೆಲ್ಲ ಗಂಟುಕಟ್ಟಿಡು. ನನ್ನ ಮುಂದೆ ತೋರಿಸಬೇಡ ಅತ್ತು ಅಂಜಿಕೆ ಹಾಕುವಿಯೇನು? ನೀನು ಏನು ಮಾಡಿದರೂ ನಾನು ಕರೆದುಕೊಂಡು ಹೋಗಲಿಕ್ಕಿಲ್ಲ.

ದಾಸಿ:—(ಒಳಗೆಬಂದು) ಮಹಾರಾಜ, ತಮ್ಮ ಸ್ನೇಹಿತರಾದ ಹೇಮಂತರಾಯರ ಸೇವಕನು ತಮ್ಮನ್ನು ಕಾಣಬಂದಿರುವನು.

ವಸಂತ:—(ದಾಸಿಗೆ) ಅವನಿಗೆ ಒಳಗೆಬರಹೇಳು. (ದಾಸಿಯು ಹೋಗಿ ಸೇವಕನನ್ನು ಕರೆದುಕೊಂಡು ಒಳಗೆ ಬರುತ್ತಾಳೆ.)

ಸೇವಕ:—ದೇವರು. ರಾಮ, ರಾಮ.

ವಸಂತ:—ಯಾಕೋ, ಮುಕುಂದಾ ಯಾಕೆ ಬಂದಿ?

ಮುಕುಂದ:—ದೇವರು ಹೇಮಂತರಾವಸಾಹೇಬರು ತಮ್ಮನ್ನು ಕರೆದುಕೊಂಡು ಬಾ ಎಂದು ಹೇಳಿದರು.

ವಸಂತ:—ಹೇಮಂತರಾಯರು ಮನೆಯಲ್ಲಿರುವರೇನು ?

ಸೇವಕ:—ಹೌದು ಮಹಾರಾಜ.

ವಸಂತ:—ಅವರಕೂಡ ಮತ್ತೆಯಾರು ಇರುವರು ?

ಸೇವಕ:—ತಮ್ಮಿಬ್ಬರ ಗೆಳೆಯರಾದ ಮನೋಹರರಾಯರು ಬಂದಿರುವರು.

ವಸಂತ:—ಒಳ್ಳೇದು ನಾನು ಈಗಲೇ ಬಂದೆ. ನೀನು ಮುಂದೆ ನಡೆ. (ಮುಕುಂದನು ಹೋಗುತ್ತಾನೆ.) (ದಾಸಿಗೆ) ಹೀರಾ ಇವಳು ಇನ್ನು ಏನು ಮಾಡುವಳೋ, ನೋಡುತ್ತ ಇಲ್ಲಿಯೇ ಕುಳಿತುಕೋ. ಇವಳನ್ನು ಬಿಟ್ಟುಹೋಗಬೇಡ.

ಹಿರಾ:—ದೇವರು ತಮ್ಮ ಅಪ್ಪಣೆಯಾದಂತೆ ಮಾಡುವೆನು.

(ವಸಂತರಾಯನು ಹೋಗುತ್ತಾನೆ.)

ಹೀರಾ:—(ಗಜರೆಗೆ) ಅಮ್ಮನವರೇ, ತಾವು ಏನು ಮಾಡುವಿರೋ ನೋಡುತ್ತ ಕುಳಿತುಕೋ. ಎಂದು ಒಡೆಯರ ಅಪ್ಪಣೆಯಾಗಿರುವದು. ಒಂದುವೇಳೆ ತಾವು ಏನಾದರೂ ಜೀವಕ್ಕೆ ಅಪಾಯ ಮಾಡಿಕೊಂಡೀರೆಂದು ಅವರಿಗೆ ಸಂಶಯ ಬಂದಿರಬಹುದು.

ಗಜರಾ:—ಹೀರಾ ಜೀವಕ್ಕೆ ಅಪಾಯವನ್ನೇನು ಮಾಡಿಕೊಳ್ಳಲಿ. ಈಗಾದ ಅಪಾಯವು ಸಾಕಾಗಲಿಲ್ಲೇ? (ಅಳುತ್ತ) ಹೀರಾ ನೀನು ನನ್ನ ಪ್ರೀತಿಯ ದಾಸಿ. ನನ್ನ ತಾಯಿಯಗಿಂತ ನಿನ್ನನ್ನು ಹೆಚ್ಚು ನಂಬಿರುವೆನು. ನಿನ್ನ ಹೊರ್ತು ನನ್ನ ದುಃಖಗಳನ್ನು ಯಾರಮುಂದೆ ಹೇಳಲಿ! ಯಾರು ನನಗೆ ಸಮಾಧಾನ ಹೇಳ್ಯಾರು ?

ಹೀರಾ:—ಅಮ್ಮನವರೇ ಅಳಬೇಡಿರಿ. ಒಂದುವೇಳೆ ನಿಮ್ಮನ್ನು ಕರೆದುಕೊಂಡು ಹೋಗಬೇಕೆಂಬ ಮನಸಿದ್ದರೂ ಸಿಟ್ಟಿನ ಭರದಲ್ಲಿ ಅವರು ಹೀಗೆ ಅಂದಿರಬಹುದು. ಅದನ್ನೆಲ್ಲ ನೀವು ಮನಸ್ಸಿಗೆ ಹಚ್ಚಿಕೊಳ್ಳಬೇಡಿರಿ.

ಗಜರಾ:—ಹೀರಾ ಹೀಗೆ ಅನ್ನಲಿಕ್ಕೆ ನಾನು ಮಾಡಿದ ತಪ್ಪಾದರು ಏನೇ? ವಿಜಯನಗರಕ್ಕೆ ತಮ್ಮ ಕೂಡ ನಾನೂ ಬರುತ್ತೇನೆಂದು ಪ್ರೀತಿಯಿಂದ ಹೇಳುತ್ತಿರಲು ಮಾತನಾಡುತ್ತಾಡುತ್ತ ಒಮ್ಮೆಲೇ ಸಿಟ್ಟಿಗೇಳಬೇಕೇನೆ? ಅವರು ನನ್ನನ್ನು ಕರೆದುಕೊಂಡು ಹೋಗುವದು, ಹೋಗದಿರುವದು ಬೇರೆ ಉಳಿಯಿತು. ನನಗೆ ಸೋಗಲಾಡಿ ಎಂದು ಹೆಸರು ಮಾತ್ರ

ಇಟ್ಟರು. ನಾನು ಅತ್ತು ಅಂಜಿಕೆ ಹಾಕುವೆನಂತೆ, ಸ್ತ್ರೀಯರಿಗೆ ಸ್ವಲ್ಪ ತೊಂದರೆಯಾದರೆ, ಸುಲಭವಾಗಿ ದೊರಕುವ ಆಧಾರವೆಂದರೆ ಕಣ್ಣೀರು ಸುರಿಸುವದು ಮಾತ್ರ. ಇದರಲ್ಲಿ ಅಂಜಿಕೆಹಾಕಿದಂತೆ ಏನಾಯಿತು ! ಹೀಗಿರಲು ನನ್ನನ್ನು ಸುಮ್ಮ ಸುಮ್ಮನೇ ದೂಷಿಸಿದರು.

ಹೀರಾ:—ಅಮ್ಮನವರೇ ಸುಮ್ಮನೆ ಬಳಲಬೇಡಿರಿ. ವಸಂತರಾಯರಿಗಾದರೂ ನಿಮ್ಮ ಮೇಲೆ ಅಂತಃಕರುಣವಿಲ್ಲವೇ ? ಒಂದುವೇಳೆ ಹೀಗೆ ಅನ್ನಬಾರದಾಗಿತ್ತೆಂದು ಅವರಿಗಾದರೂ ಕೆಡಕೆನಿಸಿ ಆ ಮೇಲೆ ನಿಮ್ಮನ್ನು ಸಂತೋಷದಿಂದ ಕರೆದುಕೊಂಡು ಹೋದಾರು. ಅಳಬೇಡಿರಿ.

ಗಜರಾ:— ಇಲ್ಲೇ ಹೀರಾ. ಹಾಗಾಗುವ ಸಂಭವವಿಲ್ಲ. ಅವರು ಇಂದಿನವರೆಗೆ ಹೀಗೆ ಅಂದಿರಲಿಲ್ಲ. ನನ್ನ ಮೇಲೆ ತೋರಿಸುವ ಈ ಉದಾಸೀನ ವೃತ್ತಿಗೆ ಏನಾದರೂ ವಿಶಿಷ್ಟ ಕಾರಣವಿರಬಹುದು. ಏನೇ ಇರಲಿ. ನನಗಂತೂ ಅವರನ್ನು ಬಿಟ್ಟು ಇರುವದಾಗದು. ತಾವು ಮಾತ್ರ ನನ್ನನ್ನು ಬಿಟ್ಟು ಹೋಗಲಿಕ್ಕೆ ಸಿದ್ಧರಾಗಿರುವರು. ಅವರು ಹೋದ ದಿವಸವೇ ನನಗೆ ದಿಕ್ಕು ತಪ್ಪಿದ ಹಾಗಾದೀತು. ಹೀರಾ ಆದದ್ದು ಆಗಲಿ, ನಾನೂ ಅವರನು ಹಿಂಬಾಲಿಸಲೇನು !

ಹೀರಾ:—ಬೇಡ. ಅವರ ಮನಸ್ಸಿನಲ್ಲಿ ನಿಮ್ಮನ್ನು ಕರೆದುಕೊಂಡು ಹೋಗುವದು ಇಲ್ಲದಿದ್ದರೆ ಹಟದಿಂದ ಅವರಕೂಡ ಯಾಕೆ ಹೋಗುತ್ತೀರಿ? ಬೇಕಾದರೆ ತಮಗೇ ತಿಳಿದು ಕರೆದುಕೊಂಡು ಹೋಗಲಿ.

ಗಜರಾ:—ಹಾಗಾದರೇನು ಮಾಡಲಿ ? ತಾವಾಗಿಯೇ ನನ್ನನ್ನು ಕರೆದುಕೊಂಡು ಹೋಗಲಿಕ್ಕಿಲ್ಲ. ಮತ್ತು ನನಗೆ ಅವರನ್ನು ಬಿಟ್ಟು ಇರುವದು ಎಂದೂ ಆಗದು. ಅವರು ಊರಿಗೆ ಹೋಗುವರೆಂದು ತಿಳಿದಾಗಿನಿಂದ ನನ್ನ ಮನಸ್ಸಿನಲ್ಲಿ ಸ್ವಸ್ಥವಿಲ್ಲ. ಲಜ್ಜಿತಳಾಗಿ ಇದನ್ನೆಲ್ಲ ಬಣ್ಣಿಸಿ ಹೇಳುವದು ನನ್ನ ಬಾಯಿಂದಾಗದು.

ಹೀರಾ:—ಅಮ್ಮನವರೇ ಹೀಗೆ ಮಾಡಿದರೆ ಹ್ಯಾಗಾದೀತು? ನೀವು ಏನೂ ಹೇಳದಿದ್ದರೆ ಅವರಿಗೆ ತಿಳಿಯುವ ಬಗೆ ಹೇಗೆ? ಮನಸ್ಸಿನಲ್ಲಿ ಆಗುವದನ್ನು ನಾಚದೆ ಬಿಚ್ಚಿ ಹೇಳಿರಿ. ವಸಂತರಾಯರು ಆ ಮೇಲೆ ನಿಮ್ಮ ಮಾತನ್ನು ಧಿಕ್ಕರಿಸಲಿಕ್ಕಿಲ್ಲ.

ಗಜರಾ:—ಇದೇ ನನಗಾದರೂ ಯೋಗ್ಯ ಕಾಣುತ್ತದೆ. ಆದರೆ ಹೀಗೆ ಹೇಳಲಿಕ್ಕೆ ಧೈರ್ಯವಾಗಲಿಕ್ಕಿಲ್ಲ.

ಹೀರಾ:— ಹೇಗಾದರೂ ಮಾಡಿ ಹೇಳಿರಿ. ಬಿಟ್ಟುಹೋಗುವದು ನಿಶ್ಚಯವಿದ್ದರೂ ಚಿಂತೆ ಇಲ್ಲ.

ಗಜರಾ:—ಒಳ್ಳೇದು, ಹಾಗೇ ಮಾಡುವೆನು. ಹೀರಾ ನಿನಗೆ ಬಹಳ ಹೊತ್ತಾಯಿತು. ಮನೆಗೆ ಹೋಗು. ದಾರೀ ನೋಡ್ಯಾರು.

ಹೀರಾ:—ಒಳ್ಳೇದು ಹೋಗುವೆನು. ನಾನು ಹೇಳಿದಷ್ಟು ಮಾಡಿರಿ. ಮಾತ್ರ, ನಾಚಬೇಡಿರಿ. ( ಹೋಗುತ್ತಾಳೆ. )

ಗಜರಾ—( ತನ್ನಷ್ಟಕ್ಕೆ ) ಹೃದಯವೇ, ಹೀರೆಯು ಮಾತನು ಕೇಳಿ ಸ್ವಲ್ಪ ವೇಳೆ ಕಾತರ ಭಾವವನ್ನು ಬಿಡು.

( ರಾಗ ಸಾರಂಗ " ನಾಗಮುರಲೀಧರ " ಎಂಬಂತೆ )

ಹೃದಯ ಧೈರ್ಯವತಾಳು । ಎದೆಗುದಿಯ ಸಲೆಕೇಳು ॥ ಪಲ್ಲ ॥
ಮದನತಾಪವಪೇಳು ಹೃದಯವಲ್ಲಭಗೆ ॥ ಅನುಪಲ್ಲ ॥
ವಿರಹದ ಬಳಲಿಕೆಯ । ಪರಿಯ ವರ್ಣಿಸಿ ಪೇಳು ॥
ಭರದಿ ಪೋಗುವ ಪ್ರಾಣ । ಪರಿರಕ್ಷಿಸೆನುತ ॥ ೧ ॥
ಎಂದಗಲದಂದದಿ । ಬಂಧಿಸು ಪ್ರೇಮದಿ ॥
ಮಂದಭಾಗ್ಯಳ ರಕ್ಷಿ । ಸೆಂದು ಬಿನ್ನೈಸು. ॥ ೨ ॥

( ಹೋಗುತ್ತಾಳೆ. )

---

## ೧ ನೇ ಅಂಕು.

## ೨ ನೇ ಪ್ರವೇಶ.

( ಸ್ಥಳಃ-ಹೇಮಂತರಾಯನ ಮನೆ. )

( ಹೇಮಂತನೂ ಮನೋಹರನೂ ಮಾತಾಡುತ್ತ ಕುಳಿತಿರುತ್ತಾರೆ. )

ಹೇಮಂತ:—ಮನೋಹರಾ, ನೀನು ಹೇಳುವ ವೇಶ್ಯೆಯು, ವಸಂತನ ಮನಸ್ಸಿಗೆ ಬಂದಾಳೋ ಇಲ್ಲವೋ, ನನಗೆ ಸಂಶಯ ಬರುತ್ತದೆ. ಆದರೂ ಚಿಂತೆಯಿಲ್ಲ. ವಿಜಯನಗರಕ್ಕೆ ಅವಳನ್ನು ನಿನ್ನಕೂಡ ಕರೆದುಕೊಂಡು ಬಾ.

ಸೇವಕ:—( ಒಳಗೆಬಂದು ) ರಾವಸಾಹೇಬ, ವಸಂತರಾಯರು ನಾನು ಬರುತ್ತೇನೆ, ನೀನು ಮುಂದೆ ನಡೆ, ಎಂದು ಹೇಳಿದರು.

ಹೇಮಂತ:—ಒಳ್ಳೇದು. ನೀನು ಬಾಗಿಲದಲ್ಲಿ ಕುಳಿತುಕೋ. ಅವರ ಹೊರ್ತು ಯಾರನ್ನೂ ಒಳಗೆ ಬಿಡಬೇಡ.

ಸೇವಕ:— ಯಾಕಾಗಲೊಲ್ಲದು ದೇವರು.

ವಸಂತ:—( ಒಳಗೆ ಬಂದು ) ಏನು, ಹೇಮಂತಾ ವಿಜಯನಗರಕ್ಕೆ ಹೋಗುವದು ನಿಶ್ಚಿತವಾಯಿತೇ ?

ಹೇಮಂತಃ—ಹೌದು. ಹೊರಡುವ ದಿವಸವನ್ನು ಮಾತ್ರ ಇನೂ ಗೊತ್ತು ಮಾಡಿಲ್ಲ.

ವಸಂತಃ—ಮನೋಹರಾ, ನೀನೂ ಬರುವಿ ಏನು?

ಹೇಮಂತಃ—ಅವನು ಬರುವನಷ್ಟೇ ಅಲ್ಲ; ಸಕುಟುಂಬಸಪರಿವಾರ ವಾಗಿ ಬರುವನು.

ವಸಂತಃ—ಈ ಅಖಂಡ ಬ್ರಹ್ಮಚಾರಿಗೆ ಎಲ್ಲಿಯ ಕುಟುಂಬ ಪರಿವಾರಗಳನ್ನು ತಂದಿ?

ಹೇಮಂತಃ—ಇಂಥ ಉದಾಳಶಿರೋಮಣಿಗಳಿಗೆ ಕುಟುಂಬಗಳೇನು ಕಡಿಮೆ? "ಉದಾಳಚರಿತಾನಾಂ ತು ವಸುಧೈವ ಕುಟುಂಬಕಂ"

ಮನೋಹರಃ—ಯಾಕೆ? ವಸಂತಾ, ಬಲು ಕೆಣಕಿ ಕೇಳುವಿ? ಸ್ವಲ್ಪ ದಿವಸಗಳಹಿಂದೆ ನಿನಗೆ ಎಷ್ಟು ಕುಟುಂಬಗಳಿದ್ದವು? ಗಜರಾ ಬಾಯಿಯು ನಿನ್ನನ್ನು ಚನ್ನಾಗಿ ಚಪ್ಪರಿಸಿದಂತೆ ತೋರುತ್ತದೆ.

ವಸಂತ—ಅದಿರಲಿ. ಪ್ರಸ್ತುತ ವಿಷಯದ ಕಥಾನಾಯಿಕೆ ಯಾರು?

ಹೇಮಂತಃ—ಮಲಕೆ; ಯೆಂಬ ಒಬ್ಬ ತರುಣವೇಶ್ಯೆಯು. ನೀನು ನೋಡಿದ್ದರೂ ನೋಡಿರಬಹುದು.

ವಸಂತಃ—ಓಹೋ! ಆ ಬಡಪ್ರಾಣಿಯು ಇವನ ಬೆಂಬಲಕ್ಕೆ ಬಿದ್ದರೆ ತೀರಿತು ಸ್ವಲ್ಪ ದಿವಸಗಳಲ್ಲಿಯೇ ಕೈಯೊಳಗೆ ಪರಟೆಯನ್ನು ಕೊಡುವನು.

ಹೇಮಂತಃ—ಹಾಗಾಗುವದು ಸ್ವಾಭಾವಿಕವೇ. ದುಷ್ಟರೀತಿಯಿಂದ ಗಳಿಸಿದ ಹಣವು ದುಷ್ಟರ ಪಾಲೇ.

ಮನೋಹರಃ—ಛೀ! ಛೀ! ಹಾಗೆ ನಾನು ಎಂದೂ ಮಾಡಲಿಕ್ಕಿಲ್ಲ. ಮಲಕೆಯು ಗಾಯನ ನರ್ತನಗಳಲ್ಲಿ ಕುಶಲಳು ನನ್ನಂಥ ಕಲಾಭಿಮಾನಿಯು ಅವಳು ಬೇಡಿದಷ್ಟು ಕೊಟ್ಟೇನು. ಅವಳ ಹಣವನ್ನು ಅಪಹರಿಸುವದಂತೂ ದೂರೇ ಉಳಿಯಿತು.

ವಸಂತಃ—ಅವಳ ಹಣವನ್ನು ಅಪಹರಿಸದಿದ್ದರೆ, ಅವಳ ಆಭರಣಗಳನ್ನು ಅಪಹರಿಸುವಿ.

ಮನೋಹರಃ—ಈಗ ಅವಳೇ ನನಗೊಂದು ಆಭರಣವಾಗಿರುವಳು. ಅವಳಿಗೆಲ್ಲಿಯ ಆಭರಣ ಮತ್ತೆ?

ವಸಂತಃ—ನನ್ನ ಮಾತೇನು ಸುಳ್ಳಾಯಿತು? (ತನ್ನಷ್ಟಕ್ಕೆ) ಇಂಥ ನೀಚ ಜನರು ಈ ರೀತಿಯ ಚಾಟುವಚನಗಳಿಂದ ಅಜ್ಞಾನಿಯರಾದ ಹೆಂಗಸರನ್ನು ಮರುಳುಮಾಡಿ, ಅವರ ಗುಣವನ್ನೂ ಹಣವನ್ನೂ ಒಮ್ಮೆಲೇ ಅಪಹರಿಸುವರು. ಗಾಯನ ನರ್ತನ ಮುಂತಾದ ಪವಿತ್ರವಾದ ಕಲೆಗಳಿಗೆ ಇಂಥ ನೀಚತನದ ಸಹವಾಸವು ಯಾಕೋ ದೇವರೇ ಬಲ್ಲ. ಜೇನುಹುಟ್ಟು ಮುಳ್ಳುಕಂಟಿಗಳೊಳಗೇ ಯಾಕೆ ಬಹಳ? ಇಂಥ ವೈಚಿತ್ರ್ಯವು ಸೃಷ್ಟಿಸ್ವಾಭಾವಿಕ ನಿಯಮವಾಗಿರಬಹುದು. ಅಂದಮೇಲೆ ಉಪಾಯವಿಲ್ಲ. ಆದರೂ ಈ ಮಲಕೆಯು ಮನೋಹರನನ್ನು ಬಿಟ್ಟು ಇನ್ನೊಬ್ಬ ರಸಿಕನ ಸಹವಾಸದಲ್ಲಿದ್ದರೆ ಎಷ್ಟು ಒಳಿತಾಗುತ್ತಿತ್ತು! ಇರಲಿ. (ಪ್ರಕಾಶವಾಗಿ) ಮನೋಹರಾ ಅವಳನ್ನು ವಿಜಯನಗರಕ್ಕೆ ಕರೆದುಕೊಂಡು ಬರುವದರಲ್ಲಿ ನಿನ್ನ ಉದ್ದೇಶವೇನು?

ಮನೋಹರಃ—ಸ್ಪಷ್ಟವಾಗಿ ಹೇಳಬೇಕಾದರೆ ವಿಲಾಸ ವಿಹಾರಾದಿಗಳ ಹೊರ್ತು ಮತ್ತೇನೂ ಇಲ್ಲ.

ವಸಂತಃ—ಒಳ್ಳೇದು. ಹೇಮಂತಾ ಹೊರಡುವ ದಿವಸವನ್ನು ನೀನೇ ಗೊತ್ತುಮಾಡು.

ಹೇಮಂತಃ—ನಾಡದು ಬೆಳಗು ಮುಂಜಾನೆ.

ಮನೋಹರಃ—ಇಳದುಕೊಳ್ಳುವಸ್ಥಳ ಮತ್ತೂ ಅಡಿಗೆ ಊಟ ಮುಂತಾದವುಗಳ ವ್ಯವಸ್ಥೆಗಾಗಿ ಯಾರಾದರೂ ಮುಂದೆ ಹೋಗಬೇಕಾಗುವದು.

ವಸಂತಃ—ಹಾಗಾದರೆ ನಾನೇ ಮುಂದೆ ಹೋಗುವೆನು. ಒಳ್ಳೇದು ಇನ್ನು ನಾನು ಮನೆಗೆ ಹೋಗುತ್ತೇನೆ.

ಹೇಮಂತಃ—ಸ್ವಲ್ಪ ಹೊತ್ತು ಕುಳಿತುಕೋ. ನಿನ್ನ ಪ್ರೀತಿಯ ವಸ್ತುವನ್ನು ಕೊಡುವೆನು. ಮುಕುಂದಾ!

ಮುಕುಂದಃ—(ಒಳಗೆಬಂದು) ಏನು ರಾವಸಾಹೇಬ?

ಹೇಮಂತಃ—ಕೋಣೆಯ ಕಪಾಟಿನಲ್ಲಿ C. B. ಬಾಟ್ಲಿಗಳನ್ನು ಇಟ್ಟಿರುವೆನು. ಒಂದು ತಕ್ಕೊಂಡು ಬಾ. ಅತ್ತೇ ಮೇಜಿನ ಮೇಲಿನ ಗ್ಲಾಸುಗಳನ್ನು ತಕ್ಕೊಂಡು ಬಾ. (ಮುಕುಂದನು ಹೋಗುತ್ತಾನೆ.)

ಮನೋಹರಃ—C. B. ಬಾಟ್ಲಿಗಳೆಂದರೇನೋ?

ವಸಂತ:—ವೃದ್ಧಕಪಿಯೇ ಜನ್ಮಾರಭ್ಯ ಆ ಭವಾನಿ ತೀರ್ಥ ತಕ್ಕೊಂಡು ಅವಳಹೆಸರು ಗೊತ್ತಿಲ್ಲವೇ? C. B. ಅಂದರೆ "Camele Brand"

ಮನೋಹರ:—ಹಾ! ಹಾ! ಅಟ್ಟಂಡು ತಟ್ಟಿಯು ಹಾದವ ನೇಳು. ನಾನು. ಒಂದು ಇಂಗ್ಲೀಷ ಹೆಸರು ಗೊತ್ತಿಲ್ಲದಿದ್ದರೆ ಏನಾಯಿತು? (ಮುಕುಂದನು ಸರಾಯಿ ತರುತ್ತಾನೆ. ಅದನ್ನು ಎಲ್ಲರೂ ಕುಡಿಯುತ್ತಾರೆ.)

ವಸಂತ:—ಒಳ್ಳೇದು. ಇನ್ನು ನಾನು ಹೋಗುತ್ತೇನೆ.

ಮನೋಹರ:—ಈಗಲೇ ಹೋಗಬೇಡ. ಹೊಸದಾಗಿ ಗಜರೆಯ ಗಂಡನಾಗಿರುವಿ. ಕೆಲವು ಕಾಲ ಬದುಕಿರು.

ವಸಂತ:—ಇರಲಿ ನಿನ್ನ ಮೂರ್ಖತನಕ್ಕೆ ಎಣೆಯಿಲ್ಲ. (ತನ್ನಷ್ಟಕ್ಕೆ) ಮನೆಗೆ ಹೋದರೆ ಗಜರೆಯ ಕಿಟಕಿಟಿಯು ಇಲ್ಲ ಬಂದರೆ ಇಂಥ ಕೆಟ್ಟ ಸಹವಾಸವು. ಇವೆಲ್ಲವುಗಳಿಂದ ಹ್ಯಾಗೆ ಪಾರಾಗಬೇಕೋ ತಿಳಿಯದು ಮನಸಂತೂ ಇಂಥ ತೊಂದರೆಗಳಿಂದ ದಿನದಿನಕ್ಕೆ ಚಂಚಲವಾಗಹತ್ತಿರುವದು. ಯಾವ ದುಷ್ಕೃತ್ಯಕ್ಕೆ ನನ್ನನ್ನು ಎಳೆದೊಯ್ಯುವದೊ ತಿಳಿಯದು. ಇರಲಿ ಹೀಗೆ ವಿಚಾರಮಾಡುತ್ತ ನಿಂತರೆ ಫಲವಿಲ್ಲ. (ಪ್ರಕಾಶವಾಗಿ ಒಳ್ಳೇದು. ಹೇಮಂತಾ ಹೋಗಿಬರುವೆನು (ಹೋಗುತ್ತಾನೆ.)

ಮನೋಹರ:—ಹೇಮಂತಾ ನನ್ನ ಹಂಚಿಕೆಯನ್ನಂತೂ ಕೇಳು. ಮಲಕೆಯ ಹತ್ತರ ಬಹಳ ಗಂಟು ಇರುವದು. ಅವಳನ್ನೂ ಅವಳ ತಾಯಿಯನ್ನೂ ಹೇಗಾದರೂ ಮಾಡಿ ತೆಗೆದುಬಿಟ್ಟರೆ, ನಮಗೆ ಅದೆಲ್ಲಾ ಸುಲಭವಾಗಿ ದಕ್ಕುವಹಾಗಿರುವದು. ಇದಕ್ಕೆ ನಿನ್ನ ಸಹಾಯ ಮಾತ್ರ ಬೇಕು. ಅದರ ಸಲುವಾಗಿ ನಿನಗಾದರೂ ದೊರೆತದ್ದರಲ್ಲಿ ಕೊಡುವೆನು.

ಹೇಮಂತ:—ಅದೆಲ್ಲ ಸರಿ. ಆದರೆ ವಸಂತನಿಗೆ ಈ ಮಾತು ಸರಿ ಬೀಳಲಿಕ್ಕಿಲ್ಲ.

ಮನೋಹರ:—ಅವನ ಕಣ್ಣಿಗೆ ಇಂಗು ಹಚ್ಚುವದು ಏನು ತಡ? ಒಳ್ಳೇದು. ಇವನ್ನೆಲ್ಲ ವಿಜಯನಗರಕ್ಕೆ ಹೋದಾಗ ಅಥವಾ ಹೋಗುವಾಗ ಮಾಡೋಣ. ಒಳ್ಳೇದು ನನಗೆ ತಡವಾಯಿತು ಹೋಗುತ್ತೇನೆ (ತನ್ನಷ್ಟಕ್ಕೆ) ಹಾ! ಹಾ! ಸ್ವಲ್ಪ ದಿವಸಗಳಲ್ಲಿ ನನ್ನಂಥ ಸಾವುಕಾರನಾಗುವನಾರು? (ಹೋಗುತ್ತಾನೆ.)

ಹೇಮಂತ:—(ತನ್ನಷ್ಟಕ್ಕೆ) ಎಲಾ ಮನೋಹರಾ, ನೀನು ತಿಳಿದಿರುವಿ, ನಾನೇ ಇಂಥ ನೀಚಕೃತ್ಯಗಳಲ್ಲಿ ಬಲು ನಿಪುಣನೆಂದು. ಆದರೆ ಚನ್ನಾಗಿ ವಿಚಾರಮಾಡಿನೋಡು. ನಾನು ನೀಚರಿಗಿಂತ ನೀಚನು. ವಂ

ಚಕರ ವಂಚಕನು. ಕೊಲೆಗಡಕರ ಕೊಲೆಗಡಕನು. ಮಲಕೆಯ ದ್ರವ್ಯವಂತೂ ದೂರ ಉಳಿಯಿತು. ನಿನ್ನ ಜೀವವನ್ನೂ ದ್ರವ್ಯವನ್ನೂ ಕಾಯ್ದುಕೋ. ವಸಂತನು ಇದಕ್ಕೆ ಒಪ್ಪಿಕೊಳ್ಳುವನೊ ಇಲ್ಲವೋ ಎಂದು ನಿನ್ನನು ಭ್ರಮೆಗೊಳಿಸಿದೆನು. ಆದರೆ ಮಬ್ಬಿಗೆ ಬಿದ್ದಂಥ ನಿನಗೆ ವಸಂತನು ಕೈಯೊಳಗಿನ ಗೊಂಬೆಯ ಹಾಗೆ ನಾನು ಕುಣಿಸಿದಂತೆ ಕುಣಿಯುವನೆಂಬದು ಎಳ್ಳಷ್ಟೂ ಗೊತ್ತಿಲ್ಲ. ಏನೇ ಇರಲಿ. ನಿನ್ನನ್ನು ಮಾತ್ರ ಚನ್ನಾಗಿ ಗೊತ್ತಿಗೆ ಹಚ್ಚುವೆನು. ಆಗಲಿ! ವಿಜಯನಗರದ ಪ್ರವಾಸದ್ದೊಂದು ಈ ಜನ್ಮದಲ್ಲಿ ಕಥೆಯಾಗಿ ಹೋಗಲಿ!

( ಹೋಗುತ್ತಾನೆ. ತೆರೆಯು ಬೀಳುತ್ತದೆ )

---

## ೨ನೇ ಅಂಕು.

### ೧ನೇ ಪ್ರವೇಶ.

(ಸ್ಥಳ–ವಸಂತರಾಯನ ಮನೆ.)

( ಗಜರೆಯು ಸುಮ್ಮನೆ ಕುಳಿತಿರುತ್ತಾಳೆ ಹೀರೆಯು ಒಳಗೆ ಬರುತ್ತಾಳೆ )

ಹೀರಾ:—( ಒಳಗೆ ಬಂದು ) ಪರಮೇಶ್ವರಾ, ನನ್ನ ಧನಿಯಳಿಗೆ ಸಮಾಧಾನವನ್ನುಂಟು ಮಾಡು.

(ರಾಗ–ಭೂಪ 'ಸಾಧೇ ಸುರಸಾಧೇ' ಎಂಬ ಚೀಜಿನಂತೆ.)

ಶಂಭೋ ಮಾರನಮೇಲ್ ತ್ರತೀಯ ಲೋಚನವ ತೆರೆಯೋ
ಶಂಭೋ–॥
ಕುಸುಮ ಮೃದು ಮಾನಸದಬಳೆಯರೊಳು ಶೌರ್ಯ।
ತೋರಿಸುವದುಚಿತವೇ ನೀ ಪಂಚಬಾಣನಿಗೆ।
ಅಗಲಿರ್ಪ ಗರತಿಯರ ವೇದನೆಯ ಪರಿಹರಿಸೋ ಶಂಭೋ–॥

ಒಳ್ಳೇದು. ಗಜರಾಬಾಯಿಯ ಅವಸ್ಥೆಯು ಏನಾಗಿರುವದೋ ನೋಡೋಣ. (ಮುಂದಕ್ಕೆ ಬಂದು,) ಇಕೋ! ಗಂಡನು ಪರವೂರಿಗೆ ಹೋಗಿ ಎರಡೇ ದಿವಸಗಳಾದವು. ಇಷ್ಟರಲ್ಲಿಯೇ ಹ್ಯಾಗೆ ನಿಸ್ತೇಜಳಾಗಿರುವಳು! ವಸಂತರಾಯರು ಹತ್ತರಿರುವಾಗ ಒಂದು ಕ್ಷಣಮಾತ್ರವೂ ಸಹ ಸುಮ್ಮನಿದ್ದವಳಲ್ಲ. ಅಂಥವಳು ಎಡಗೈ ಮೇಲೆ ಗಲ್ಲವನ್ನಿಟ್ಟು, ಎತ್ತಕಡೆಗೂ ನೋಡದೆ ಗೋಡೆಯಮೇಲಿನ ಗೊಂಬೆಯಂತೆ ನಿಶ್ಚಲಳಾಗಿ ಕುಳಿತಿರುವಳು. ( ಹತ್ತರ ಹೋಗಿ,) ಅವಮ್ಮಾ ನಿಮ್ಮ ಮೈಯಲ್ಲಿ ಸ್ವಸ್ಥವಿರುವದಷ್ಟೇ?

ಗಜರಾ:—ಹೀರಾ, ಏನು ಹೇಳಲಿ!

( ರಾಗ-ದೇಸ ' ಕಾಲಾಗೋಜಿ ' ಎಂಬ ಚೀಜಿನಂತೆ. )

ಜೀವವ ಧರಿಸುವೆನಿದನೆಂತು ನೀ ಪೇಳೇ।
ಪತಿವಿಯೋಗದಿಂ ದಹಿಸುತಿರೆನ್ನೊಡಲೀಗಳೆ ಜೀವವ.--॥
ಬೇಡ ಬೇಡೆನುತ ನಾ ತಡೆಯೆ ಪ್ರಾಣೇಶಾ।
ದೂಡಿಪೋದನೇ ದುಃಖದೊಳೀಶಾ।
ಕೂಡಲೊಯ್ಯನೆನ್ನನು ನಿರ್ಭಾಗ್ಯಳ ಪಾಪಿಯು ॥೧॥

ಹೀರಾ:—ಅಮ್ಮನವರೇ, ಸುಮ್ಮನೆ ದುಃಖಮಾಡುವದರಲ್ಲಿ ಏನೂ ಅರ್ಥವಿಲ್ಲ. ಹೇಗಾದರೂ ಧೈರ್ಯವನ್ನವಲಂಬಿಸಿ, ವಸಂತರಾಯರು ತಿರುಗಿ ಬರುವವರೆಗೆ ಸುಮ್ಮನಿರ್ರಿ ಅಳಬೇಡಿರಿ.

ಗಜರಾಃ— ನೀನು ಹೇಳುವದೆಲ್ಲ ನಿಜ. ಆದರೆ ಏನು ಮಾಡಲಿ? ದುಃಖವು ತಡೆಯಲಾರದಷ್ಟು ಉಕ್ಕೇರಿ ಬರುತ್ತದೆ. ಇದಕ್ಕೇನಾದರೂ ಉಪಾಯವನ್ನು ಹೇಳು.

ಹೀರಾಃ— ಅಮ್ಮನವರೇ, ವಿಜಯನಗರವೆಂದರೇನು ದೂರ? ಹೋದವರು ತಿರುಗಿ ಬಾರದೆ ಇರುವರೇ? ಹೀಗೆ ಕೂಸಿನಂತೆ ಅಳುತ್ತ ಕುಳಿತರೇನಾಗುವದು? ಸುಮ್ಮನಾಗಿರಿ,

ಗಜರಾ:—ಒಳ್ಳೇದು. ನಿನ್ನಂಥ ಹಿತಚಿಂತಕರು ಕಣ್ಣಮುಂದಿರುವಾಗ ಸ್ವಲ್ಪ ಸಮಾಧಾನವಿರುತ್ತದೆ. ಯಾರೂ ಇಲ್ಲದಾಗ ಮಾತ್ರ ಅವರ ಮೂರ್ತಿಯೇ ನನ್ನ ಕಣ್ಣೆದುರಿಗೆ ಕಟ್ಟಿದಂತಾಗುವದು. ಅಂದು ಹೇಮಂತರಾಯನ ಮನೆಗೆ ಹೊರಟಾಗ ಆಡಿದ ಕರ್ಕಶ ಶಬ್ದಗಳು, ಯಾವಾಗಲೂ ನನ್ನ ಕಿವಿಗಳನ್ನು ಗಡಚಿಕ್ಕ ಹತ್ತುವವು. ಹೀಗಾಗಿ ಯಾವರೀತಿಯಿಂದಲೂ ನನಗೆ ಸಮಾಧಾನವಿಲ್ಲ.

ಹೀರಾ:—ಅಮ್ಮನವರೇ ನಾನು ನಿಮ್ಮನ್ನು ಬಿಟ್ಟು ಹೋಗುವದಿಲ್ಲ. ಮನೆಯ ಕೆಲಸಬೊಗಸೆಗಳನ್ನು ತೀರಿಸಿಕೊಂಡು ಇಲ್ಲಿಯೇ ಕೂಡ್ರುವೆನು ನೀವು ಅದನ್ನೇ ಹಚ್ಚಿಕೊಂಡು ಕೂಡ್ರ ಬೇಡಿರಿ.

ಗಜರಾಃ—ಈ ವಿಷಯವನ್ನು ಮರೆಯುವ ಬಗೆ ಹೇಗೆ? ಹಿರಾ, ನೀನು ನನ್ನ ಅಕ್ಕನ ಸಮಾನಳೆಂದು ಹೇಳುತ್ತೇನೆ. ಲಗ್ನವಾದಂದಿನಿಂದ ನಾನು ಅವರ ಸಂಪೂರ್ಣ ವಿಶ್ವಾಸಕ್ಕೆ ಪಾತ್ರಳಾಗಿದ್ದೆನು. ನನಗೆ ತಿಳಿಸದೆ ಒಂದು ಕೆಲಸವನ್ನೂ ಅವರು ಮಾಡುತ್ತಿದ್ದಿಲ್ಲ. ಆದರೆ ಮೊನ್ನಿನ ದಿವಸ ಮಾತ್ರ ನಾನು ಕೇಳಿದರೆ, ವಿಜಯನಗರಕ್ಕೆ ಹೋಗುವ ಕಾರಣವನ್ನೂ

ಹೇಳಲಿಲ್ಲ; ನನ್ನ ಬಿನ್ನಹವನ್ನೂ ಲಕ್ಷ್ಯಕ್ಕೆ ತರಲಿಲ್ಲ. ಹೆಚ್ಚಿಗೇನು? ಹೋಗುವಾಗ ಅಡ್ಡಗಟ್ಟಿದರೆ, ಕಣ್ಣೆತ್ತಿ ಕೂಡಾ ನೋಡದೆ ನನ್ನನ್ನು ಧಿಕ್ಕರಿಸಿ ಹೊರಟು ಹೋದರು. ಇದಕ್ಕೆ ಏನಾದರೂ ಗುಪ್ತವಾದದ್ದೊಂದು ವಿಶಿಷ್ಟ ಕಾರಣ ಇರಲಿಕ್ಕೆಬೇಕು.

ಹೀರಾ:—( ತನ್ನಷ್ಟಕ್ಕೆ ) ಈ ವಿಶಿಷ್ಟಕಾರಣವು ನನಗೆ ಸ್ವಲ್ಪ ಗೊತ್ತುಂಟು. ಆದರೆ ಅದನ್ನು ಹೇಳಬೇಕೋ ಹೇಳಬಾರದೋ ಸಂಶಯ ಬಂದಿರುವದು. ಇರಲಿ ಹೇಳಿ ಬಿಡುವೆನು. ಯಾಕಂದರೆ ಹೇಳತಕ್ಕ ಮಾತನ್ನು ಮನಸಿನಲ್ಲಿ ಹಾಗೇ ಇಟ್ಟುಕೊಂಡರೆ, ಮುಂದೆ ಅದು ಬಹಳ ಸಂತಾಪವನ್ನು ಕೊಡುವದು. ( ಪ್ರಕಾಶವಾಗಿ ) ಅಮ್ಮನವರೇ, ನಾನು ಇದರಬಗ್ಗೆ ಒಂದು ಗುಪ್ತವಾದ ಸುದ್ದಿಯನ್ನು ಹೇಳಬೇಕಾಗಿದೆ. ಹೇಳೆಂದರೆ ಹೇಳುವೆನು.

ಗಜರಾ:—ಅದೇನೇ? ಹೀರಾ, ಹೇಳು. ಹೇಳು. ಇಲ್ಲಿ ಯಾರೂ ಇಲ್ಲ.

ಹೀರಾ:—ಒಳ್ಳೇದು. ಹೇಮಂತರಾಯರ ಸೇವಕನಾದ ಮುಕುಂದ ನನ್ನು ಬಲ್ಲಿರಲ್ಲಾ?

ಗಜರಾ:—ಅಹುದು, ಗೊತ್ತಿರುವದು.

ಹೀರಾ:—ಅವನೂ ಅವನ ಹೆಂಡತಿಯೂ ವಸಂತರಾಯರ ವಿಷಯವಾಗಿ ಏನೋ ಮಾತಾಡುತ್ತಿದ್ದರು. ವಸಂತರಾಯರ ಹೆಸರನ್ನು ಕೇಳಿದ ಕೂಡಲೆ ನಾನು ಅಲ್ಲಿಯೇ ನಿಂತು, ಎಲ್ಲವನ್ನು ಕೇಳಿಕೊಂಡೆನು.

ಗಜರಾ:—ಹೀರಾ, ಏನದು? ಏನೇನು ಮಾತಾಡುತ್ತಿದ್ದರು?

ಹೀರಾ:—ವಿಜಯನಗರಕ್ಕೆ ಹೇಮಂತರಾಯನೂ, ಮನೋಹರರಾಯನೂ ಹೋಗುವವರಂತೆ. ಅವರು ತಮ್ಮ ಕೂಡ ಮಲಕೆಯೆಂಬವಳನ್ನು ಕರೆದುಕೊಂಡು ಹೋಗುವವರಂತೆ. ಇಳಿದುಕೊಳ್ಳುವ ಸ್ಥಳ ಮುಂತಾದ ವ್ಯವಸ್ಥೆಗಾಗಿ ವಸಂತರಾಯರು ಮುಂದೆ ಹೋಗಿರುವರಂತೆ.

ಗಜರಾ:—ಛೇ! ಛೇ! ಹೀರಾ, ಘಾತವಾಯಿತು. ವಿಜಯನಗರಕ್ಕೆ ಹೋಗಗೊಡಬಾರದಾಗಿತ್ತು.

ಹೀರಾ:—ಆದರೆ ಇನ್ನೇನು ಮಾಡುವಿರಿ?

ಗಜರಾ—ಇನ್ನಾದರೂ ಅಲ್ಲಿಗೆ ಹೋಗಿ ಅವರ ಸ್ವೈರಾಚರಣೆಯನ್ನು ನಿಲ್ಲಿಸಬೇಕು ಪ್ರಾಣನಾಥಾ, ಮನೋಹರನ ಸಂಗತಿಯು ಬೇಡೆಂದು ನಾನು ಎಷ್ಟು ಹೇಳಿದರೂ ಕೇಳಲಿಲ್ಲವಲ್ಲ! ಈಗ ಯಾರ ಜೀವಕ್ಕೆ ಸಂಕಟ?

ಹೀರಾ—ಅಮ್ಮನವರೇ ವಸಂತರಾಯರ ಗುಣವು ತಿಳಿದಂತಾಯಿತು. ಇನ್ನು ಅವರ ಗೊಡವೆಗೆ ಹೋಗಬೇಡಿರಿ. ಮನಸಿಗೆ ಬಂದಂತೆ ಮಾಡವೊಲ್ಲರೇಕೆ.

ಗಜರಾ—ಹೀರಾ, ಈ ಮಾತು ನನಗೆ ಸ್ವಲ್ಪ ದಿವಸಗಳಹಿಂದೆಯೇ ಹೊಳೆಯಿತು. ಆದ್ದರಿಂದಲೇ ನಾನು ನಿನಗೆ ' ನನ್ನನ್ನು ಬಿಟ್ಟು ಹೋಗುವದರಲ್ಲಿ ಏನಾದರೂ ವಿಶಿಷ್ಟ ಕಾರಣವಿರಬಹುದು, ಎಂದು ಅಂದು ತೋರಿಸಿದೆನು.

ಹೀರಾ—ಅದಿರಲಿ. ಈಗಮಾತ್ರ ನೀವು ಹೋಗದಿರುವದು ನೆಟ್ಟಗೆ ಹೋದಮೇಲೆ ನಾನು ಬೇಡೆನ್ನುತ್ತಿರಲಾಗಿ ನೀನು ಹೇಗೆ ಬಂದೆ ಎಂದು ಮತ್ತಿಷ್ಟು ಸಿಟ್ಟಿಗೆದ್ದರೇನುಗತಿ?

ಗಜರಾ—ಹೀರಾ, ಇಂಥ ನಡತೆಯನ್ನು ತಡಕೊಳ್ಳುವದು ಹೆಂಗಸೆಂಬುವವಳಿಗೆ ಆಗಲಿಕ್ಕಿಲ್ಲ. ಅವರ ಸುಖದುಃಖಕ್ಕೆ ನಾನು ಪಾಲುಗಾರ್ತಿಯಿರಲಿಕ್ಕೆ, ಯಾವಾಕಿಯೋ ಹಾದರಗಿತ್ತಿ ಅವರ ಸಂಗಡ ವಿಜಯನಗರಕ್ಕೆ ಹೋಗಬೇಕಂತೆ? ನಾನು ಮಾತ್ರ ಬರಬಾರದಂತೆ ಎಂಥ ಅನ್ಯಾಯವಿದು? ಹೀರಾ, ನಾನು ವಿಜಯನಗರಕ್ಕೆ ಹೋಗಿಯೇ ತೀರುವೆನು. ನೀನು ನನ್ನ ಸಂಗಡ ಬಾ.

ಹೀರಾ—ನಿಮ್ಮ ಮನಸಿಗೆ ಬಂದಂತೆ ಆಗಲಿ.

ಗಜರಾ—ಆದ್ದರಿಂದ ನೀನು ಈಗಲೇ ಹೋಗಿ ಹೊರಡಲಿಕ್ಕೆ ಸಿದ್ಧಳಾಗಿ ಬಾ.

ಹೀರಾ—ಒಳ್ಳೇದು ಹೋಗುವೆನು ( ಹೋಗುತ್ತಾಳೆ. )

ಗಜರಾ—( ತನ್ನಷ್ಟಕ್ಕೆ ) ಮುಲಕೆಯು ನನಗಿಂತ ಚಲುವೆಯಿರಬಹುದೇನು? ಅಥವಾ ಪ್ರಾಣನಾಥರು ಅವಳ ಗಾಯನ ನರ್ತನಗಳಿಗೆ ಮೆಚ್ಚಿರಬಹುದು. ಛೇ! ಎರಡೂ ಸುಳ್ಳು ಅವರಂಥ ನಿಜವಾದ ಅಂತಃಕರಣಿಗಳು ಭೂಮಿಯ ಮೇಲೆ ಮತ್ತೊಬ್ಬರು ಸಿಗಲಿಕ್ಕಿಲ್ಲ. ಇದೆಲ್ಲವೂ ಮನೋಹರ ಹೇಮಂತರ ತ್ರೋಟಕವಿದ್ದಂತೆ ತೋರುತ್ತದೆ. ಓಹೋ! ಹೌದು. ಹೀಗೆಯೇ ಇರಲಿಕ್ಕೆ ಬೇಕು. ಇದೆಲ್ಲಾ ಸಂಗತಿಯ ಫಲವು. ಎಲಾ,

ನೀಚಾ, ಹೇಮಂತಾ ನಿನ್ನ ದುಷ್ಕೃತ್ಯಗಳಲ್ಲಿ ಪ್ರಾಣನಾಥರನ್ನು ಎಳೆದು ಕೊಳ್ಳಲಿಕ್ಕೆ ಕಾರಣನಾದರೂ ಏನು? ನಮ್ಮ ನಿಶ್ಚಿಂತೆಯು ಸಂಸಾರವು ನಿನ್ನ ಕಣ್ಣೊಳಗೆ ಒತ್ತುತ್ತಿತ್ತೇ? ಇದಿರಲಿ; ಮಲಕಿ ಯೇಕೆ? ಪ್ರತ್ಯಕ್ಷ ರಂಭೆ ಯಾಗವೊಲ್ಲಳೇಕೆ, ಪ್ರಾಣನಾಥರಿಗೆ ಅವಳ ಹಸ್ತಸ್ಪರ್ಶವನ್ನು ಕೂಡ ಈ ಗಜರೆಯ ಜೀವವಿರುವವರೆಗೆ ಮಾಡಗೊಡಲಿಕ್ಕಿಲ್ಲ. ಆಗಲಿ, ಒಂದು ಬಾರಿ, ವರ್ರಿಗೆ ಹಚ್ಚಿಬಿಡುವೆನು.

## ೨ ನೇ ಪ್ರವೇಶ.

( ಸ್ಥಳ:—ಹಂಪಿಯಲ್ಲಿ ವಸಂತರಾಯನು ಇಳಿದು ಕೊಂಡ ಸ್ಥಳ. )
( ವಸಂತರಾಯನು ಒಬ್ಬನೇ ಕುಳಿತಿರುತ್ತಾನೆ. )

ವಸಂತರಾಯ:—( ತನ್ನಷ್ಟಕ್ಕೆ ) ಎರಡುಮೂರು ದಿವಸಗಳಾದವು; ಹೇಮಂತನೂ ಮನೋಹರನೂ ಏನು ಕಾರಣವೋ ಇನ್ನೂ ಬರಲಿಲ್ಲವಲ್ಲ? ಬಹಳಮಾಡಿ ಮಲಕೆಯನ್ನು ಕರೆದುಕೊಂಡು ಬರುವ ಗೊಂದಲಕ್ಕೆ ಅವರು ಬಿದ್ದಿರಬಹುದು. ಅಹಹಾ! ಮಲಕೀ, ನೀನು ಏನು ಧನ್ಯಳೇ? ನಿನ್ನ ಸೌಂದರ್ಯದ ಕೀರ್ತಿಯು ಎಲ್ಲ ಕಡೆಗೂ ಹಬ್ಬಿರುವದಲ್ಲ! ಯಾವ ದೇವರು ನಿನಗೆ ಇಂಥ ರೂಪವನ್ನು ಕೊಟ್ಟಿದ್ದಾನು! ನಿನ್ನನ್ನು ನೋಡಿದಮೇಲೆ ಜನ್ಮವು ಸಫಲವಾಯಿತೆಂದು ತಿಳಿಯದ ಮೂಢನಾರು? ಮಲಕೀ, ನಿನ್ನನ್ನು ನೊಡಿದರೆ ಇಷ್ಟು ಆನಂದ—ಅಲ್ಲ; ನೋಡಿದ್ದು ನೆನಪಿಗೆ ಬಂದರೆ. ಅಂದಮೇಲೆ ನಿನ್ನಕೂಡ ನಾಲ್ಕು ಸವಿಮಾತುಗಳಾಡಿ, ನಿನ್ನನ್ನು ಕೈಹಿಡಿದು ಮುಂದಕ್ಕೆ ಕರೆದು, ಗಟ್ಟಿಯಾಗಿ ನಿನ್ನನ್ನು ಅಪ್ಪಿಕೊಂಡವನಂತೂ ಎಂಥ ಧನ್ಯನು! ಅಹಹಾ! ಹಾ! ಕೈ ಮೇಲಕ್ಕೆ ಮಾಡಿದರೆ ಸ್ವರ್ಗವೇ ಅವನಿಗೆ, ಇರಲಿ. ಇಲ್ಲಿಗೆ ಬಂದಾರೇ ಬಾ ನೋಡೋಣ. ಶಾಶ್ವತವಾಗಿ ಆ ದುಷ್ಟ ಮನೋಹರನ ಕೈಯನ್ನೇ ಸೇರಿದೆಯಂದರೆ ಮಾತ್ರ ನಿನಗೆ ಕಷ್ಟವು ಕಟ್ಟಿಟ್ಟಂತೆ ( ತುಸುಹೊತ್ತು ನಿಂತು, ಎಲಾ! ಇದೇನು? ಮಲಕೆಯ ವಿಷಯವಾಗಿ ವಿಚಾರಿಸುವಾಗ ಒಮ್ಮಿಂದೊಮ್ಮೆಲೇ, ಗಜರೆಯು ಬಂದು ನಿಂತಾ ತಾಗುವದಲ್ಲ? ಗಜರಾ, ನೀನು ಹುಬ್ಬು ಗಂಟಿಕ್ಕಿ ನನ್ನ ಮೇಲೆ ಗದ್ದಂಸಬೇಡ. ಎಷ್ಟೋ ಜನರು ಇಂದಿಗೂ ಕೂಡಾ ತಿಳಿದಿರುವರು—ವೇಶ್ಯಾ ಸಂಗವು ಗಂಡಸರಿಗೆ ಭೂಷಣವಂತೆ.–ಅಂದಮೇಲೆ, ಮಲಕೆಯು ಮೇಲೆ ನನ್ನ ಪ್ರೀತಿಯು ಹೋಗಹತ್ತಿರಲು ನೀನು ಯಾಕೆ ನನಗೆ ಅಡ್ಡ ಬರುವಿ? ( ವಿಚಾರ ಮಾಡುತ್ತ ಸುಮ್ಮನೆ ನಿಲ್ಲುತ್ತಾನೆ. )

( ಗಜರೆಯೂ ಹೀರೆಯೂ ಬರುತ್ತಾರೆ. )

ಹೀರಾ:—ಅಮ್ಮನವರೇ, ಇಲ್ಲಿ ಬನ್ನಿರಿ. ವಸಂತರಾಯರು ಏನೋ ವಿಚಾರಿಸುತ್ತ ಇಲ್ಲಿಯೇ ಕುಳಿತಿರುವರು. ನೀವೇ ಮುಂದೆ ಹೋಗಿ ಅವರನ್ನು ಮಾತಾಡಿಸರಿ.

ವಸಂತ:—(ನೋಡಿ ಗಾಬರಿಯಾಗಿ ತನ್ನಷ್ಟಕ್ಕೆ) ಎಲಾ! ಇವಳಿಗೇನು ಅಂತರ್ಜ್ಞಾನವಿರುವದೋ? ವೇತಾಳಬಲವು ಸಾಧಿಸಿರುವದೋ? ಏನು? ಇವಳನ್ನು ನೆನಿಸಿದಕೂಡಲೇ ನನ್ನ ಕಣ್ಣೆದುರಿಗೇ ಬಂದು ನಿಂತಳಲ್ಲ! ಅಥವಾ ನಾನು ಏನೂ ಹೇಳದೆ ಬಂದದ್ದರಿಂದ, ಇವಳಿಗೆ ತಿಳಿಸದೆ ಏನು ಮಾಡುವೆನೋ, ನೋಡಲಿಕ್ಕೆ ಬಂದಿರಬಹುದು. ಹಾಗಾಗದೆ, ಇವಳಿಗೆ ಅಂಜುವವರಾರು? ಇರಲಿ ಈಗ ಗಾಬರಿಯಾದವನಹಾಗೆ ಕಂಡರೆ, ಎಲ್ಲವೂ ಗೊತ್ತಾದೀತು. (ಪ್ರಕಾಶವಾಗಿ) ಓಹೋ! ಗಜರಾ! ಇಲ್ಲಿ ಹ್ಯಾಗೆ ಬಂದೆ? ಇತ್ತ ಬಾ; ಇಲ್ಲಿ ಕುಳಿತುಕೋ.

ಗಜರಾ:—ಪ್ರಾಣನಾಥರ ಮೈಯಲ್ಲಿ ಸ್ವಸ್ಥವಷ್ಟೇ?

ವಸಂತ:—ಪ್ರಿಯೇ, ನಿನಗೆ ಸ್ವಸ್ಥವಿರುವವರೆಗೆ ನನಗೂ ಸ್ವಸ್ಥವೇಸರಿ.

ಗಜರಾ:—ಯಾಕೋ ಗಾಬರಿಯಾದಂತೆ ತೋರುತ್ತೀರಿ?

ವಸಂತ:—ಅದೇನಿಲ್ಲ; ನೀನು ಅಕಸ್ಮಾತ್ತಾಗಿ ಬಂದೆಯೆಂದು ನನಗೆ ಆಶ್ಚರ್ಯವಾಗಿರುವದು.

ಗಜರಾ:—ನೀವು ಅಲ್ಲಿಂದ ಹೋದಮೇಲೆ ನನಗೆ ಒಂದು ತರದ ಭ್ರಾಂತಿಯಿಂದ ಏನೂ ತೋಚದಂತಾಯಿತು. ಸ್ವಲ್ಪಸಹ ನಿಮ್ಮನ್ನು ಬಿಟ್ಟು ಇರುವದಾಗಲಿಲ್ಲ. ಆದ್ದರಿಂದ ಇಲ್ಲಿಗೆ ಬಂದೆನು.

ವಸಂತ:—(ತನ್ನಷ್ಟಕ್ಕೆ) ಆಹಾ! ನನ್ನನ್ನು ಬಿಟ್ಟು ಇವಳಿಗೆ ಇರುವದಾಗಲಿಲ್ಲವಂತೆ ಇಂಥ ಮಾತುಗಳು ಕಥೆ-ಕಾದಂಬರಿಗಲ್ಲಿ ಚನ್ನಾಗಿ ಶೋಭಿಸುವವು. ನಿಜವಾದ ಜನರಿಗೆ ಮಾತ್ರ ಯೋಗ್ಯವಲ್ಲ. ತಮ್ಮಷ್ಟಕ್ಕೆ ತಾವೇ ಸುಶಿಕ್ಷಿತರೆಂದು ಕರೆದುಕೊಳ್ಳುವ ಹೆಂಗಸರು, ಪುಸ್ತಕಗಳೊಳಗಿಂದ ಕಲಿತುಕೊಂಡು ಇಂಥ ಮಾತುಗಳ ಉಪಯೋಗವನ್ನು ಚನ್ನಾಗಿ ಮಾಡಿಕೊಳ್ಳುವರು. ಜಾಣನಾದವನು ಇಂಥ ಮಾತುಗಳಿಗೆ ಎಳ್ಳಷ್ಟಾದರೂ ಮಹತ್ವವನ್ನು ಕೊಡಬಾರದು.

ಗಜರಾ:—ಪ್ರಾಣನಾಥರು ನನ್ನ ಮಾತನ್ನು ಕೇಳಿದಂತೆ ಕಾಣುವದಿಲ್ಲ.

ವಸಂತಃ—ಕೇಳಿದೆನು, ಕೇಳಿದೆನು. ಒಳ್ಳೇದಾಯಿತು.

ಗಜರಾ:—ನಿಮ್ಮನ್ನು ಕಂಡಮೇಲೆ ಮನಸಿನ ಅಸ್ವಸ್ಥತೆಯು ದೂರಾಗಿ ಈಗ ನನಗೆ ಸ್ವಲ್ಪ ಸಮಾಧಾನವೆನಿಸುತ್ತದೆ. ಇಷ್ಟವಿದ್ದರೆ, ತಮ್ಮ ಅಪ್ಪಣೆಯನ್ನು ತಕ್ಕೊಂಡು ತಿರುಗಿ ಹೋಗುವೆನು.

ವಸಂತಃ—ಮೊದಲು ಬರಬಾರದಾಗಿತ್ತು ಬಂದಮೇಲೆ ತಿರುಗಿ ಹೋಗುವದೇಕೆ? ನಾಲ್ಕಾರು ದಿವಸ ಇಲ್ಲಿ ಇರು. ಆ ಮೇಲೆ ನಾನೂ ನೀನೂ ಕೂಡಿಯೇ ಹೋಗುವಾ.

ಗಜರಾಃ—ತಮ್ಮ ಅಜ್ಞಾನುಸಾರವಾಗಿ ನಡೆಯುವೆನು.

ವಸಂತಃ—(ತನ್ನಷ್ಟಕ್ಕೆ) ಆಜ್ಞಾನುಸಾರವಾಗಿ ನಡಿಯಬೇಕಾಗಿದ್ದರೆ ಇಲ್ಲಿಗೆ ಯಾಕೆ ಬರುತ್ತಿದ್ದಳೋ!

ಹೀರಾಃ—ಅಮ್ಮನವರೇ ಇದೊಂದು ತಾರು ಬಂದಿದೆ.

ಗಜರಾಃ—ಇಲ್ಲಿತಾ. ( ಒಡೆದು, ಓದಿಕೊಳ್ಳುತ್ತಾಳೆ. ) Comiug together with Malka & Monohar by the next train [ ತನ್ನಷ್ಟಕೆ ] ಹೀರೆಯು ಹೇಳಿದ ಸುದ್ದಿಯು ಅಕ್ಷರಶಃ ನಿಜವಾದದ್ದಿರುತ್ತದೆ. ಇನ್ನು ಹಿಂದೆಮುಂದೆ ನೋಡಿ ಪ್ರಯೋಜನವಿಲ್ಲ. ಸ್ಪಷ್ಟವಾಗಿ ಮಾತಾಡಲಿಕ್ಕೆ ಬೇಕು. [ ಪ್ರಕಾಶವಾಗಿ ] ಪ್ರಾಣನಾಥರೇ ಇದೇನು? ಈ ರೀತಿಯು ನನಗೆ ಸರಿಬರಲಿಕ್ಕಿಲ್ಲ.

ವಸಂತಃ—[ತನ್ನಷ್ಟಕ್ಕೆ] ಇವಳಿಗೆ ಯಾವ ಶಿಕ್ಷೆಯನ್ನು ವಿಧಿಸಿದರೆ ನನ್ನ ಸಿಟ್ಟು ಇಳಿದೀತು? ಇಲ್ಲಿಗೆ ಬರುವಾಗಾದರೂ ಹೀಗೆಯೇ ನನಗೆ ತೊಂದರೆಕೊಟ್ಟಳು. ಇಲ್ಲಿಗೆ ಬಂದಮೇಲೆಯೂ ಇವಳ ಕಾಟ ತಪ್ಪಿಲ್ಲ. ಥೂ! ಥೂ! ಥೂ! ಕಲಿತಂಥ ಹೆಂಗಸನ್ನು ಎಂದಿಗೂ ಮದುವೆಯಾಗಬಾರದು! ಎಲ್ಲಿಯಾದರೂ ಹೋಗಲಿಕ್ಕೆ ನನಗೆ ಸ್ವಾತಂತ್ರ್ಯವಿಲ್ಲ. ಜಗಳಾಡಿ ಮನೆಬಿಟ್ಟು ಹೋದರೆ ಬೆನ್ನಟ್ಟಿದವರಂತೆ ಬರುವಳು. ನನ್ನ ಪತ್ರವ್ಯವಹಾರವಂತೂ ಎಂದಿಗೂ ಗುಪ್ತ ಉಳಿಯುವಹಾಗಿಲ್ಲ. ಛೀ! ವಿಧಿಯೇ? ನನ್ನ ಯಾವ ಪಾಪದ ಸಲುವಾಗಿ ಕಲಿತವಳನ್ನು ಮದುವೆಯಾಗಬೇಕೆಂದು ವಿಧಿಸಿದಿ! ಇರಲಿ ಇವಳಮೇಲೆ ಸಿಟ್ಟಿಗೆದ್ದರೆ ನನ್ನ ಆಟವು ನಡಿಯುವಂತಿಲ್ಲ. ಇವಳನ್ನು ಸವಿಮಾತುಗಳಿಂದಲೇ ವಂಚಿಸಿ, ನನ್ನ ಮನಸಿನೊಳಗಿನ ಕಾರ್ಯವನ್ನು ನಾನು ಕಡೆಗಾಣಿಸಲಿಕ್ಕೆ ಬೇಕು.

ಗಜರಾಃ—ಯಾಕೆ? ಸುಮ್ಮನೆ ಕುಳಿತಿರಿ?

ವಸಂತಃ—ನೀನು ನನ್ನ ಮೇಲೆ ವ್ಯರ್ಥವಾಗಿ ಸಿಟ್ಟಿಗೆದ್ದದ್ದನ್ನು ನೋಡಿ, ವಿಷಾದವೆನಿಸಿತು. ಅವನ್ನು ನುಂಗಿಕೊಳ್ಳಲಿಕ್ಕೆ ಸುಮ್ಮನೆ ಕುಳಿತೆನು.

ಗಜರಾಃ—ಹಾಗಾದರೆ, ಈ ತಾರು ಎಲ್ಲಿಯದು? ಮಲತಿಯೂ ಮನೋಹರನೂ ಇಲ್ಲಿಗೆ ಯಾಕೆ ಬರುವರು? ನಿಮಗೆ ತಾರು ಮಾಡಲಿಕ್ಕೆ ಕಾರಣವೇನು?

ವಸಂತಃ—ಪ್ರಿಯೇ, ಅವರು ತಮ್ಮಿಷ್ಟಕ್ಕೆ ತಾವು ಬರುವರು. ನನಗೆ ಏನೂ ಸಂಬಂಧವಿಲ್ಲ. ಸಾಧಾರಣ ಪರಿಚಯದ ಹೊರ್ತು ಅವರಿಗೂ ನನಗೂ ಸಹವಾಸವಿಲ್ಲ. ತಾರು ಮಾಡಿದ್ದರ ಕಾರಣವು ನಿನಗೆ ಹೇಗೆ ತಿಳಿಯುವದೋ, ಹಾಗೇ ನನಗೂ ತಿಳಿಯುವೊಲ್ಲದು. ಇದೆಲ್ಲವನ್ನು, ಬಂದ ಮೇಲೆ, ನಾನು ಮನೋಹರನನ್ನು ಕೇಳಿಕೊಳ್ಳುತ್ತೇನೆ. ನೀನು ಸ್ವಲ್ಪ ಸಂಶಯಗ್ರಸ್ತಳಾದಂತೆ ತೋರುತ್ತದೆ. ಆದರೆ ಹಾಗಾಗಲಿಕ್ಕೆ ತಿಲಮಾತ್ರವೂ ಕಾರಣವಿಲ್ಲ. ಅಗ್ನಿಸಾಕ್ಷಿಯಾಗಿ ಕೈಪಿಡಿದದ್ದರಿಂದ, ನಾನು ನಿನ್ನನ್ನು ಎಂದಿಗೂ ಮರೆಯಲಿಕ್ಕಿಲ್ಲ. ಕಂಡಿಯಾ.

ಗಜರಾಃ—[ ತನ್ನಷ್ಟಕ್ಕೆ ] ಮಾತುಗಳಂತೂ ಬಲುಸವಿ. ಆದರೆ ಆಚರಣೆಯು ಹ್ಯಾಗೋ ಏನೋ [ ಪ್ರಕಾಶವಾಗಿ ] ಇದಕ್ಕೆ ನನಗೆ ವಚನ ಕೊಡುವಿರಾ?

ವಸಂತಃ—ಪ್ರಣದರಸಿ, ನಿನಗೆ ಎಂಥ ವಚನಬೇಕು?

[ ರಾಗ-ತಿಲಂಗ 'ಪಾನಿಯ ಭರನ' ಎಂಬ ಚೀಜಿನಂತೆ. ]

ಸ್ವಾಮಿನಿ ಭಾವಿಪರೇನೇ । ಕಾಮುಕನೆಂದನ್ಯರೊಳು ॥
ಎನ್ನನು ನೀ ॥ ಪಲ್ಲ ॥

ಎನ್ನಯ ಚಿನ್ನದ ಗೊಂಬೆಯು, ಕೊರಳು ಪಿಡಿದು ಪೇಳ್ವೆ ಕೇಳೆ ।
ಅನ್ಯಳ ನಾನೆಂದಿಗರಿಯೆ ॥ ಅನುಪಲ್ಲ ॥

ಮಾನ್ಯಳೆ ಸಂಶಯ ದೂರಿದು ಕರುಣವಿಟ್ಟು ನೋಡು ।
ಈ ದಾಸನ । ಅನ್ಯಳನಾನೆಂದಿಗರಿಯೆ ॥ ೧ ॥

[ ವಸಂತನು ಹೀಗನ್ನುವಾಗ ಗಜರೆಯು ಉಂಗುರವನ್ನು ಉಚ್ಚಿಕೊಳ್ಳುತ್ತಾಳೆ. ]

ವಸಂತಃ—ಪ್ರಿಯೇ, ನಿನಗೆ ಉಂಗುರುವು ಬೇಕೇ? ತಕ್ಕೋ.

[ ಗಜರೆಯು ಸುಮ್ಮನಿರುತ್ತಾಳೆ. ]

ವಸಂತಃ—ಪ್ರಿಯೇ, ಇನ್ನೂ ನಿನ್ನ ಸಂಶಯವು ಹೋದಂತೆ ತೋರುವದಿಲ್ಲ. ಉಂಗುರವನ್ನು ಯಾರಿಗಾದರೂ ಕೊಡುವೆನೆಂದು ತಿಳಿದಿರುವಿಯೇನು?

[ ಗಜರೆಯು ಕೆಳಗೆ ಮೋರೆಮಾಡಿ ಸುಮ್ಮನೇ ಕೂಡ್ರುತ್ತಾಳೆ ]

ವಸಂತಃ—ಇಕೋ. ಉಂಗುರವನ್ನೂ ತಕ್ಕೋ. ಈ ಹಣದ ಚೀಲವನ್ನೂ ತಕ್ಕೋ. ಯಾರಿಗೆ ಇನ್ನೇನು ಕೊಡಲಿ? ಇನ್ನಾದರೂ ನನ್ನ ಮೇಲಿನ ಸಂಶಯವು ಹೋಯಿತೇ?

[ ಗಜರೆಯು ಮತ್ತೂ ಸುಮ್ಮನಿರುತ್ತಾಳೆ. ]

ವಸಂತಃ—ಪ್ರಿಯೇ, ಮಾತಾಡಹೊಲ್ಲೆಯೇಕೆ? ನನ್ನ ಮೇಲೆ ಸಿಟ್ಟಾಗಿರುವಿಯಾ. ನಿನ್ನನ್ನು ನನ್ನ ಕೂಡ ಕರೆದುಕೊಂಡು ಬರಲಿಲ್ಲವೆಂದು? ಆದರೆ ನೀನೇ ಬಂದಿಯಲ್ಲ? ಮತ್ತೇನು? ಎಂದಿನಂತೆ, ನಿನ್ನ ಸವಿನುಡಿಯಿಂದ ನನ್ನನು ಸಂತೋಷಗೊಳಿಸು. ಮಾತಾಡು ನನ್ನ ಕೂಡು ಮಾತಾಡು.

[ ಗಜರೆಯ ಗಲ್ಲಗಳನ್ನು ಪಿಡಿಯುತ್ತಾನೆ. ]

ಗಜರಾಃ—( ಹಿಂಪಕ್ಕೆ ಸರಿಯುತ್ತ ನಸುನಕ್ಕು ) ಏನಿಲ್ಲ. ನಿಮ್ಮ ಮೇಲೆ ನನ್ನದು ಏನೂ ಸಂಶಯವಿಲ್ಲ.

ವಸಂತಃ—ಸಂಶಯವಿದ್ದವಳಹಾಗೆ ಹೀಗೆ ಯಾಕೆ ಮಾಡುವಿ?

ಗಜರಾಃ—ನಾನೇನು ಮಾಡುವೆನು?

ವಸಂತಃ—ನನ್ನ ಕೂಡ ಮಾತಾಡಬಾರದೇಕೆ?

ಗಜರಾಃ—ಮಾತಾಡುವೆನಲ್ಲ?

ವಸಂತಃ—( ನನ್ನಷ್ಟಕ್ಕೆ ) ಹಾ! ಈಗ ನನ್ನ ಸವಿಮಾತುಗಳಿಗೆ ಇವಳು ಚನ್ನಾಗಿ ಮರುಳಾಗಿರುವಳು. ಇವಳ ಮನಸಿನಲ್ಲಿ ನನ್ನ ಸಲುವಾಗಿ ಯಾವ ಕುಕಲ್ಪನೆಗಳೂ ಇದ್ದಂತೆ ತೋರುವದಿಲ್ಲ. ಹಾಗಾದರೇನು? ನನ್ನ ಕೆಲಸವು ಸುಲಭವಾಗಿ ಆಗುವದು. ಆವರೆ ಉಂಗುರವನ್ನೂ ಹಣದ ಚೀಲವನ್ನೂ ಕಳೆದುಕೊಂಡೆನು. ತಾನಾಗಿಯಂತೂ ತಿರುಗಿ ಕೊಡಲಿಲ್ಲ. ಬೇಡಿದರೆ ಮತ್ತೆ ಸಿಟ್ಟಿಗೆದ್ದಾಳು. ಒಳ್ಳೇದು ಬಿಟ್ಟು ಬಿಡುವೆನು.

ಹೀರಾಃ—ಒಡೆಯರೇ, ಹೊರಗೆ ಮುಕುಂದನು ಬಂದಿರುವನು ಹೇಮಂತರಾಯರು ಇದೇ ಈಗ ಬಂದರಂತೆ ತಮಗೆ ಭೆಟ್ಟಿಯಾಗಲಿಕ್ಕೆ ಹೇಳಿಕಳುಹಿರುವರು.

ವಸಂತ:—ಒಳ್ಳೇದು: ನಾನು ಈಗಲೇ ಬರುವೆನೆಂದು ಹೇಳು. (ಗಜರೆಗೆ) ಗಜರಾ, ಹೇಮಂತನು ಎಲ್ಲಿ ಇಳಿದಿರುವನು, ಮನೋಹರನು ಬಂದನೋ ಹೇಗೆ, ಬಂದಿದ್ದರೆ ತಾರು ಯಾಕೆ ಮಾಡಿದರು, ಮುಂತಾದ ಸಂಗತಿಗಳನ್ನು ತಿಳಿದುಕೊಂಡು ಬರುವೆನು. ಇದಕ್ಕೆ ನಿನ್ನ ಸಮ್ಮತಿಯಿರುವದಷ್ಟೇ?

ಗಜರಾ—(ತನ್ನಷ್ಟಕ್ಕೆ) ಇಂಥ ಕೆಲಸಗಳಲ್ಲಿ ನನ್ನ ಸಮ್ಮತಿಯನ್ನು ಕೇಳಬೇಕಾಗಿದ್ದರೆ, ನನ್ನನ್ನು ಬಿಟ್ಟು ಇಲ್ಲಿಗೆ ಬರುತ್ತಿದ್ದಿರೇಕೆ? (ಪ್ರಕಾಶವಾಗಿ) ಕುಶಾಲ ಹೋಗಿ ಬರ್ರಿ. ಇದಕ್ಕೆ ನನ್ನನ್ನೇನು ಕೇಳುವದು? (ತನ್ನಷ್ಟಕ್ಕೆ) ಕರೀಕೇಳ ಮಸಾಲಿ ಅರೆಯುವರೇನು?

ವಸಂತ:—ಆದರಲಿ ಮನಸಿಗೆ ಯಾವತರದ ತೊಂದರೆಯನ್ನೂ ಮಾಡಿಕೊಳ್ಳದೆ ಸ್ವಲ್ಪಹೊತ್ತು ವಿಶ್ರಮಿಸು. ಪ್ರಿಯೇ, ಪ್ರವಾಸದಿಂದ ನೀನು ಬಹಳ ದಣಿದಿರುವಿಯಲ್ಲವೇ? ನನ್ನ ಸಲುವಾಗಿ ಈರೀತಿಯಿಂದ ಯಾಕೆ ಶ್ರಮಪಡುವಿ? ಹೋಗು. ನಾನು ಬರುವವರೆಗೆ ಸ್ವಲ್ಪ ಹೊತ್ತು ಆಡ್ಡಾಗು. (ಹೋಗುತ್ತಾನೆ.)

ಹೀರಾ:—ಅಮ್ಮನವರೇ, ನೀವು ಉಂಗುರವನ್ನೂ ಹಣದ ಚೀಲವನ್ನೂ ತಕ್ಕೊಂಡದ್ದೇ ಒಳ್ಳೇದಾಯಿತು. ಇಲ್ಲದಿದ್ದರೆ ಅವು ಮಲಕೆಯ ಪಾಲಾಗುತ್ತಿದ್ದವು.

ಗಜರಾ:—ಅದಾಯಿತು. ಆದರೆ, ಈಹೊತ್ತಿನ ಸವಿಮಾತುಗಳನ್ನು ಕೇಳಿದಿಯಾ? ಹೀರಾ, ಈ ಪರಿಯನ್ನು ನಾನು ಎಂದೂ ನೋಡಿದ್ದಿಲ್ಲ. ಈಹೊತ್ತಿನ ಮಾತುಗಳಲ್ಲಿ ಎಂಥ ಮಾಧುರ್ಯವು? ನಡತೆಯಲ್ಲಿ ಎಷ್ಟು ನಮ್ರತೆಯು? ನನ್ನ ಮೇಲೆ ಎಷ್ಟು ಪ್ರೀತಿ? ಹೀರಾ, ಇದೆಲ್ಲವೂ ನಿಜವಾದ ಪ್ರೀತಿಯಾಗಬಾರದಾಗಿತ್ತೇ! ಇಲ್ಲ. ನನ್ನ ಅಹಿತವನ್ನು ಬಯಸುವ ಹತವಿಧಿಯು ಹಾಗಾಗಗೊಡುವದಿಲ್ಲ. ಹೀರಾ ಸ್ವಲ್ಪ ಹೊತ್ತಿನಲ್ಲಿ ಬರುವ ಏನೋ ಒಂದು ಅನರ್ಥವು ಇಬ್ಬನ್ನಿಯೊಳಗಿನ ಹೆಬ್ಬಾವಿನಂತೆ, ನನಗೆ ಮಸಕುಮಸಕಾಗಿ ತೋಚಹತ್ತಿರುವದು ದೇವರೇ ಇದರೊಳಗಿಂದ ಹ್ಯಾಗೆ ಪಾರಾದೇನು!

ಹೀರಾ:—ಅಮ್ಮನವರೇ, ನೀವು ಮನಸಿನಲ್ಲಿ ಕೆಟ್ಟ ಕಲ್ಪನೆಗಳನ್ನು ತಂದುಕೊಳ್ಳಬೇಡಿರಿ. ಇಲ್ಲಿಯ ಪಂಪಾಪತಿಯನ್ನು ಸ್ಮರಿಸಿ, ವಸಂತರಾಯರಿಗೆ ಒಳ್ಳೇ ಬುದ್ಧಿಯನ್ನು ಕೊಡೆಂದು ಬೇಡಿಕೊಳ್ಳಿರಿ.

ಗಜರಾ:—ಹೀರಾ, ನಿನಗೆ ಗೊತ್ತಿರಲಿಕ್ಕಿಲ್ಲ. ಮಿತಿಮೀರಿದ ಆದರವು ತನ್ನಕೂಡ, ಏನಾದರೂ ಒಂದು ವಂಚನೆಯನ್ನು ತಪ್ಪದೆ ತಂದಿರುತ್ತದೆ. ಇದರಲ್ಲಿ ನನ್ನಂಥ ಅಬಲೆಯು ದೇವರನ್ನು ಸ್ಮರಿಸುವದರಹೊರ್ತು ಮತ್ತೇನು ಮಾಡಲು ಸಮರ್ಥಳು.

ಹೀರಾ:—ದೇವರನ್ನು ಸ್ಮರಿಸುವದರಕೂಡ, ಮನುಷ್ಯನು ತನ್ನ ಕೈಲಾದ ಮಟ್ಟಿಗೆ ಪ್ರಯತ್ನವನ್ನು ಮಾಡುವದು ಬಿಡಬಾರದು.

ಗಜರಾ:—ಹೀರಾ, ನನಗೆ ಯಾವಪ್ರಯತ್ನವು ಸಾಧ್ಯವಾಗುವಹಾಗಿರುವದು

ಹೀರಾ:—ಏನಾದರೂ ಯುಕ್ತಿಯು ಸೂಚಿಸಿದರೆ ನೋಡಿರಿ ನಾನೂ ಕೈಲಾದ ಮಟ್ಟಿಗೆ ಸಹಾಯ ಮಾಡುವೆನು.

ಗಜರಾ:—( ಧ್ಯಾನಿಸಿ ) ಹಾಗಾದರೆ, ನೀನು ಹೀಗೆ ಮಾಡು. ಯಾರಿಗೂ ಗೊತ್ತಾಗದಹಾಗೆ, ಮನೋಹರ, ಹೇಮಂತ, ಮಾಲತಿ, ಈ ಮೂವರ ಸಂಬಂಧವಾಗಿ ಎಲ್ಲ ಸುದ್ದಿಯನ್ನು ಅರಿತುಕೊಂಡು ಬಾ. ಮತ್ತು ಯಾವಾಗಲೂ ಪ್ರಾಣನಾಥರ ಬೆನ್ನು ಕಾಯುವದು ಬಿಡಬೇಡ. ಅವರು ಏನೇನು ಮಾಡುವರೋ ಎಲ್ಲವನ್ನು ನನಗೆ ತಿಳಿಸು. ಹೋಗು, ಈಗಲೇ ನಿನ್ನ ಕೆಲಸಕ್ಕೆ ನೀನು ಹೋಗು.

ಹೀರಾ:—ಒಳ್ಳೇದು ಹಾಗೇ ಮಾಡುವೆನು ( ಹೋಗುತ್ತಾಳೆ )

ಗಜರಾ:—( ತನ್ನಷ್ಟಕ್ಕೆ ) ಇವರ ಈ ಹೊತ್ತಿನ ಆಚರಣೆಯನ್ನು ನೋಡಿ ಮನಸು ಎಷ್ಟು ಉದ್ವಿಗ್ನವಾಗಿರುವದಲ್ಲ! ಏನಿರಬಹುದು? ನನ್ನನ್ನು ಬಿಟ್ಟು ಇಲ್ಲಿಗೆ ಹೊರಟಾಗಲೇ ನನಗೆ ಸಂಶಯವು ಬಂದಿತು. ನನಗೆ ತಿಳಿಯಗೊಡಬಾರದೆನ್ನುವಂಥ ಕೆಲಸವಾದರೂ ಏನಿದ್ದೀತು? ತಮ್ಮ ಮಾತು ಮೀರಿ ಬಂದದ್ದಕ್ಕೆ ಮೊದಲು ಸಿಟ್ಟು ಮಾಡುವದೇಕೆ? ಆ ಮೇಲೆ ಈ ಒಣ ಅಜ್ಜಿಜ್ಜಿಯೇಕೆ? ಮಾಲತಿಯು ಬರುವಳೆಂದು ತಾರು ಇವರಿಗೇಕೆ ಬಂದಿರಬಹುದು ಅವಳಿಗೂ ಇವರಿಗೂ ಸಂಬಂಧವಿದ್ದೀತೇನು? ಇದ್ದರೂ ಇರಬಹುದು. ಇಂಥ ಕೀಳಜನರ ಸಹವಾಸಕ್ಕೆ ಬಿದ್ದಮೇಲೆ ಮೊದಲು ಎಷ್ಟು ಸದಾಚಾರಿಗಳಿದ್ದರೂ ಒಮ್ಮೆಲೇ ದುರ್ಮಾರ್ಗಕ್ಕೆ ಹ್ಯಾಗೆ ಹತ್ತುವರಲ್ಲ! [ ತುಸುಹೊತ್ತು ಸುಮ್ಮನೆ ನಿಂತು ] ಇದೇ ನಿಜವಿದ್ದರೆ ನನ್ನದೇನು ಗತಿ?

( ರಾ-ಪಿಲು ' ಮಿ ಅಧನಾ ' ಎಂಬಂತೆ )

ಗತಿಯೇನಿನ್ನು । ಪತಿ ತಾ, ಬಿಡಲು ॥
ಮತಿಹೀನಳಾಗಿ ನಿ- । ಶ್ಚಿತವನರಿಯೆ ನಾ ॥ ಪತಿ ತಾ
ಬಿಡಲು ॥ ಪಲ್ಲ ॥
ವಲ್ಲಭನಾಧಾರ । ಇಲ್ಲದ ಸತಿಯು || ಮಲ್ಲಿಕೆ
ಮಂಡಪದಿಂ ಬೀಳ್ದು ಕೊಲ್ಲದೆ ಸಾಯ್ವಂದದಿ ಸಾಯ್ವಳ್ ॥ ೧ ॥

[ ಹೊಗುತ್ತಾಳೆ. ]

### ೩ ನೇ ಪ್ರವೇಶ.

ಸ್ಥಳ—ಹೇಮಂತರಾಯನು ಇಳಿದಿರುವ ಹಾಳುದೇಗುಲ

[ ಹೇಮಂತನೂ ವಸಂತನೂ ಮಾತಾಡುತ್ತ ಕುಳತಿರುತ್ತಾರೆ. ]

ವಸಂತಃ—ಹೇಮಂತಾ ನಿನಗೆ ನನ್ನ ಇಚ್ಛೆಯನ್ನಂತೂ ಹೇಳಿರುವೆನು. ಮಲಕೆಯನ್ನು ಮನೋಹರನ ಪಶದಿಂದ ತಪ್ಪಿಸುವದು ನಿನ್ನನ್ನು ಕೂಡಿತು.

ಹೇಮಂತ:—ಅವರಿಬ್ಬರಿಗೂ ಒಡಕು ಹುಟ್ಟಿಸಲಿಕ್ಕೆ ನಿನ್ನಿನ ರಾತ್ರಿಯ ಒಂದು ಸಂಗತಿಯು ಬಹಳ ಸಹಾಯಕರವಾಗಿರುವದು.

ವಸಂತಃ—ಅದು ಯಾವದು ?

ಹೇಮಂತಃ—ಮನೋಹರನು, ಬಹಳ ದಿವಸಗಳಿಂದಲೇ, ಮಲಕಿಯ ದ್ರವ್ಯವನ್ನೆಲ್ಲ ಎತ್ತಿಹಾಕಬೇಕೆಂದು ಹವಣಿಸುತ್ತಿದ್ದನು. ನಿನ್ನಿನ ರಾತ್ರಿ ಪ್ರವಾಸದಲ್ಲಿ ಮಲಕೆಗೆ ನಿದ್ರೆಹತ್ತಿದಾಗ ನಮ್ಮ ಮುಕುಂದನ ಸಹಾಯದಿಂದ, ಆವಳ ತಾಯಿಯ ಕುತ್ತಿಗೆಯನ್ನು ಹಿಚಿಕಿ, ಆವಳ ಶವವನ್ನು ನದಿಯಲ್ಲಿ ಒಗೆದನು. ಆ ಮೇಲೆ ಅವಳ ಪೆಟ್ಟಗೆಯನ್ನು ತೆಗೆದು, ಅದರೊಳಗಿನ ಆಭರಣಗಳನ್ನೆಲ್ಲ ತಕ್ಕೊಂಡು, ತಿರುಗಿ ಊರಿಗೆ ಹೋಗುವವರೆಗೆ, ಇವುಗಳನ್ನು ಕಾದಿಡೆಂದು, ನನ್ನ ಕೈಯ್ಯಲ್ಲಿ ಕೊಟ್ಟಿರುವನು. ಮುಕುಂದನಿಗಾದರೂ ಅವುಗಳೊಳಗಿನ ಒಂದು ಆಭರಣವನ್ನು ಕೊಡುವೆನೆಂದು ವಚನ ಕೊಟ್ಟಿರುವದು. ಮನೋಹರನು, ಈ ಸಂಗತಿಯನ್ನು ನಿನಗೆ ಮಾತ್ರ ತಿಳಿಸಕೂಡದೆಂದು ನನ್ನ ಕಡೆಯಿಂದ ವಚನ ತಕ್ಕೊಂಡಿರುವನು. ಮಲಕೆಯು ಎಚ್ಚತ್ತು, ನನ್ನ ತಾಯಿಯು ಎಲ್ಲಿರುವಳೆಂದು ಕೇಳಿದಾಗ, ' ಏನೋ ನಿಮಿತ್ತದಿಂದ ಕೆಳಗಿಳಿದಳು. ವೇಳೆಗೆ ಸರಿಯಾಗಿ ಬಾರದ್ದರಿಂದ ಉಗಿಬಂಡಿಯು ತಪ್ಪಿತು. ನಾಳೆಗೆ ನಿರಾಂತಕವಾಗಿ ಬಂದು, ನಾವು ಇಳಿದುಕೊಂಡ ಸ್ಥಳಕ್ಕೆ ಮುಟ್ಟುವಳು. ನೀನು ಚಿಂತೆ ಮಾಡಬೇಡ.' ಎಂದು ಹೇಳಿ

ಅವಳನ್ನು ಸುಮನೆ ಕೂಡ್ರಿಸಿದನು. ಪೆಟ್ಟಿಗೆಯು ಕೀಲೀಕೈಯು, ತಾಯಿಯ ಕಡೆಗೆ ಉಳಿಯಿತೆಂದು ತಿಳಿದು, ಆಭರಣಗಳ ವಿಷಯವಾಗಿ ಅವಳು ಆಗ ಏನೂ ವಿಚಾರವಮಾಡಲಿಲ್ಲ. ಇನ್ನೂ ತನ್ನ ತಾಯಿಯು ಬರಲಿಲ್ಲೆಂದು, ಮಲಕಿಯು ಈಗ ಬಹಳ ಚಿಂತೆಯಲ್ಲಿರುವಳು.

ವಸಂತಃ—ಮನೋಹರನಿಗೂ, ಮಲಕಿಗೂ, ಒಡಕು ಹುಟ್ಟಿಸಲಿಕ್ಕೆ ಈ ಸಂಗತಿಯು ಉಪಯೋಗವನ್ನು ಹ್ಯಾಗೆಮಾಡಿಕೊಳ್ಳುವಿ?

ಹೇಮಂತ:—ಈಗ ಮುಕುಂದನ ಕಡೆಯಿಂದ ಎಲ್ಲರ ಸಮಕ್ಷವಾಗಿ, 'ನನಗೆ ಕೊಡತಕ್ಕ ಆಭರಣಗಳನ್ನು ಕೊಡು' ಎಂದು ಮನೋಹರನಿಗೆ ಕೇಳಲಿಕ್ಕೆ ಹಚ್ಚಬೇಕು. ತಾನು ಮಾಡಿದ ನೀಚ ಕೃತ್ಯವು ಮಂದಿಗೆ ತಿಳಿಯಬಾರದೆಂದು, ಅವನು ಏನೂ ಮಾತಾಡದೆ, ಸುಮ್ಮನೆ ಕೂಡ್ರುವನು. ಹೀಗಾಗಿ ಮುಕುಂದನಿಗೂ ಅವನಿಗೂ ಜಗಳ ಹತ್ತುವದು. ಜಗಳದ ಭರದಲ್ಲಿ ಮುಕುಂದನು ಮನೋಹರನ ನೀಚ ಕೃತ್ಯಗಳನ್ನೆಲ್ಲ ಬೈಲಿಗೆ ತಂದನೆಂದರೆ ತೀರಿತು, ಮಲಕಿಯು ತನ್ನ ತಾಯಿಯ ಕೊಲೆಯ ಸುದ್ದಿಯನ್ನು ಕೇಳಿ, ದುಃಖಿತಳಾಗಿ, ಮನೋಹರನ ಹೆಸರಿನಿಂದ ಕಲ್ಲು ಒಡೆಯು ಹತ್ತುವಳು. ಆಗ ನಾವು ಸಮಾಧಾನ ಹೇಳಿ, ಅವಳ ಮನಸ್ಸನ್ನು ನಮ್ಮ ಕಡೆಗೆ ಒಲಿಸಿಕೊಳ್ಳೋಣ.

ವಸಂತಃ—ಶಾಹಾಬಾಶ್, ಹೇಮಂತಾ! ನಿನ್ನ ಯುಕ್ತಿಗೆ ಯಾವದು ಸಾಧ್ಯವಿಲ್ಲ! ಆದರೆ ಆಭರಣಗಳನ್ನು ಏನು ಮಾಡುವಿ?

ಹೇಮಂತಃ—ಆಭರಣಗಳು ನನಗಾಗುವವು, ಮಲಕಿಯು ನಿನಗೆ.

ವಸಂತಃ—ಹಾ! ಹಾ! ಒಳ್ಳೇದಾಯಿತು ಮನೋಹರನು ಬರಿಗೈ ಬಾರಿಸುತ್ತ ಮನೆಗೆ ಹೋಗಲಿ.

ಹೇಮಂತಃ—ವಸಂತಾ, ಈಗ ಮಾತ್ರ ಈ ಆಭರಣಗಳನ್ನು ನಿನ್ನ ಹತ್ತರ ಇಟ್ಟುಕೋ ಮುಂದೆ ಮಾಡತಕ್ಕದ್ದೆಲ್ಲವನ್ನು ಮುಕುಂದನಿಗೆ ತಿಳಿಸಿ ಬರುವೆನು.

ವಸಂತಃ—ಒಳ್ಳೇದು-ಬೇಗ ತಿರುಗಿ ಬಾ (ಹೇಮಂತನು ಹೋಗುತ್ತಾನೆ) (ತನ್ನಷ್ಟಕ್ಕೆ) ಆಹಾ! ಮಲಕಾ, ನೀನು ಸ್ವಲ್ಪ ಹೊತ್ತಿನಲ್ಲಿ ನನ್ನವಳಾಗುವಿ ಆಮೇಲೆ ನಿನಗೇನು ಕಡಿಮೆ? ಈ ವಸ್ತಗಳು ಹೋದವೆ ಚಿಂತೆ ಮಾಡಬೇಡ. ಇಂಥ ಎಷ್ಟೋ ವಸ್ತುಗಳನ್ನು ನಾನು ಕೊಟ್ಟೇನು. ಆದರೆ, ನಿನ್ನ ತಾಯಿಯ ದುರ್ಮರಣದ ವಾರ್ತೆಯನ್ನು ಕೇಳಿ ನನಗೆ ಬಹಳ ವಿಷಾದವೆನಿಸುತ್ತದೆ, ಮೊದಲು ವಿಚಾರಿಸದೆ ಯಾಕೆ ಆ ರಾಕ್ಷ

ಸನಾದ ಮನೋಹರನ ಕೈಸೇರಿದಿ? ಧನದ ದುರಾಶೆಗಾಗಿ ಆ ಚಾಂಡಾಲನು ನಿನ್ನ ತಾಯಿಯ ವಧವನ್ನಂತೂ ಮಾಡಿದನು; ಇನ್ನುಮೇಲೆ ಅವನ ಸಹ ವಾಸದಲ್ಲಿದ್ದರೆ, ನಿನ್ನ ಜೀವವನ್ನಾದರೂ ಉಳಿಸುವನೋ ಇಲ್ಲವೋ ಯಾರು ಬಲ್ಲರು? ಅದಿರಲಿ ಅವನು ಹೇಳಿಕೇಳಿ ನೀಚನು! ಇನ್ನುಮುಂದೆ ಹೇಮಂ ತನು ಹೂಡುವ ಬಡಿದಾಟದಲ್ಲಿ, ಯಾರಮೇಲೆ ಹರಿಹಾಯ್ದು ಬೀಳುವ ನೋ ಯಾರ ಜೀವಕ್ಕೆ ಅಪಾಯ ತಟ್ಟುವದೋ ನಿಯಮವಿಲ್ಲ. ಆದ್ದರಿಂದ ನನ್ನ ಪಿಸ್ತೂಲನ್ನು ಸಿದ್ಧಗೊಳಿಸಿ ಇಡುವೆನು. ಕದಾಚಿತ್ ನನ್ನಮೇಲೆಯೇ ಯಾರಾದರೂ ಧುಮುಕಿ ಬಂದರೆ, ಇದರ ಉಪಯೋಗವು ಆಗ ಬಹಳ ಆ ಗಬಹುದು (ಪಿಸ್ತೂಲನ್ನು ಸಿದ್ಧಗೊಳಿಸುತ್ತಾನೆ.)

ಹೇಮಂತ—(ಒಳಗೆ ಬಂದು) ವಸಂತಾ, ಅಕೊ, ನೋಡು. ಮಾಲಕಿಯೂ ಮನೋಹರನೂ ಇತ್ತಕಡೆಗೇ ಬರುತ್ತಾರೆ. ನೀನು ಪಿಸ್ತೂಲ ನ್ನು ಯಾಕೆ ಹೊರಗೆ ತೆಗೆದಿ? ಅದನ್ನು ಬದಿಗಿಡು. (ವಸಂತನು ಪಿಸ್ತೂ ಲನ್ನು ಅಂಗಿಯಲ್ಲಿ ಬಚ್ಚಿಡುತ್ತಾನೆ.)

(ಮಾಲಕಿಯೂ ಮನೋಹರನೂ ಬರುತ್ತಾರೆ.)

ಹೇಮಂತ—ಓಹೋ! ಬಂದಿರಾ! ಬರ್ರಿ. ಮಾಲಕಾ ಇಲ್ಲಿ ಕುಳಿತುಕೊ

ವಸಂತ—ಏನು? ಮನೋಹರಾ, ಪ್ರವಾಸವು ಚನ್ನಾಗಿ ಆಯಿ ತಷ್ಟೇ?

ಮನೋ—ಹೌದು. ಚನ್ನಾಗಿ ಆಯಿತನ್ನಲಿಕ್ಕೆ ವಿಶೇಷ ಏನೂ ಅಡ್ಡಿ ಯಿಲ್ಲ.

ವಸಂತ—ಯಾಕೆ? ಯಾವಾಗಲೂ ಪೂರ್ಣಚಂದ್ರನಂತಿರುವ ಮಾ ಲಕಿಯ ಮುಖವು ಈಹೊತ್ತು ಕಳೆಗುಂದಿದಂತೆ ಕಾಣುತ್ತದೆ?

(ಮಾಲಕಿಯು ಅಳಹತ್ತುತ್ತಾಳೆ.)

ಮನೋ.—ಅವಳ ತಾಯಿಯು ದಾರಿಯಲ್ಲಿ ತಪ್ಪಿಸಿಕೊಂಡಿರುವಳು. ಈಹೊತ್ತಿನವರೆಗೂ ಬರಲಿಲ್ಲ; ಆದ್ದರಿಂದ ಅವಳು ಬಹಳ ಚಿಂತಾಕುಲಳಾ ಗಿರುವಳು.

ವಸಂತ—ಮಾಲಕಾ, ಇನ್ನೂ ಬರುವ ಹೊತ್ತುಂಟು ಅಳಬೇಡ.

(ಹೀರೆಯು ಹಣಿಕಿ ಹಾಕಿ, ನೋಡಿ ತಿರುಗಿ ಹೋಗುತ್ತಾಳೆ.)

ಮನೋಹರ—ಕಣ್ಣೊರಿಸಿಕೊ ಅಳಬೇಡ, ನಿನಗೆ ಸಮಾಧಾನವಾ ಗುವಹಾಗೆ ವಸಂತರಾಯನಕೂಡ ಸ್ವಲ್ಪ ಹೊತ್ತು ಮಾತಾಡುತ್ತ ಕುಳಿತು ಕೊ. ಬೆಳಗಾದಮೇಲೆ ನಾನು ತಿರುಗಿ ಹೋಗಿ ನೋಡಿಬರುವೆನು.

ಹೇಮ.—ಮುಕುಂದಾ !

ಮುಕುಂದಾ—ರಾವಸಾಹೇಬ ಅಪ್ಪಣೆಯಾಗಬೇಕು.

ಹೇಮ.—ಬರುವಾಗ ನಮ್ಮಕೂಡ ತಂದಿರುವ ಬಾಟ್ಲಿಗಳನ್ನು ತೆಗೆದು ಕೊಂಡು ಬಾ. (ಮುಕುಂದನು ಸರಾಯ ಬಾಟ್ಲಿಗಳನ್ನು ತಂದಿಡುತ್ತಾನೆ.) (ಹೀರೆಯು ಗಜರೆಯು ಬಂದು ಮರೆಗೆ ನಿಲ್ಲುತ್ತಾರೆ.)

ಹೀರಾ—ಅಮ್ಮನವರೇ ಇಲ್ಲಿ ನೋಡಿರಿ.

ಗಜರಾ—ಸುಮ್ಮನಿರು, ಮಾತಾಡಬೇಡ, ಇಲ್ಲಿಯೇ ನಿಂತು, ಏನಾಗುತ್ತದೆ ಎಲ್ಲಾ ನೋಡಿಕೊಳ್ಳೋಣ.

(ಎಲ್ಲರು ಸರಾಯವನ್ನು ಕುಡಿಯುತ್ತಾರೆ.)

ವಸಂತ—ಮಲಕಾ ನೀನಷ್ಟು ತಕ್ಕೊ.

ಮಲಕಾ—ತಾವು ಕೇಳಿದ್ದಕ್ಕೆ ನನ್ನ ಮೇಲೆ ಉಪಕಾರವಾಯಿತು. ಆದರೆ ನಾನು ಕುಡಿಯುವದಿಲ್ಲ ಮಾತ್ರ.

ಹೇಮಂತ—ಯಾಕೋ ಮನೋಹರಾ ಹ್ಯಾಗಿರುವದು?

ಮನೋ.—ಆಹಾಹಾ ! ಏನು ಹೇಳಲಿ. ಭೂಮಿಯೂ ಆಕಾಶವೂ ಒಂದೇ. ಸುರಾದೇವಿಯೇ, ನಿನ್ನನ್ನು ಯಾವ ದೇವರು ಹುಟ್ಟಿಸಿದನು. ನಿನ್ನ ಗುಣವರ್ಣನೆಯನ್ನು ಎಷ್ಟೆಂದು ಮಾಡಿದರೆ ತೀರೀತು. ಸಾವಿರ ನಾಲಿಗೆಯ ಶೇಷನಿಗೆ ಕೂಡ ಆಗದು. ನಿನ್ನನ್ನು ಸೇವಿಸುವವನಿಗೆ ದುಃಖದ ಹೆಸರುಸಹ ಗೊತ್ತಿಲ್ಲ. ನನ್ನ ಅಧಿದೇವತೆಯೇ, ನಿನ್ನನ್ನು ತಿರಸ್ಕರಿಸುವ ಮೂಢನು ಯಾವನಾದರೂ ಈ ಭೂಮಿಯಮೇಲೆ ಇರುವನೇನು ? ನಿನ್ನ ಮಾಧುರ್ಯವನ್ನು ಕುಡಿದವನೇ ಬಲ್ಲ. ನನಗಂತೂ ಮಲಕೆಯ ರತಿರಸದಹಾಗೆ ಎಷ್ಟು ನಿನ್ನನ್ನು ಸೇವಿಸಿದರೂ ತೃಪ್ತಿಯೇ ಇಲ್ಲ.

ಹೇಮ.—ಹಾಗಾದರೆ ಕುಡಿ. ಇನ್ನಷ್ಟು ಕುಡಿ. ಮುಕುಂದಾ ಎಲ್ಲ ಬಾಟ್ಲಿಗಳನ್ನೂ ಇತ್ತಕಡೆಗೆ ತೆಗೆದುಕೊಂಡು ಬಾ.

(ಮುಕುಂದನು ಹಾಗೇ ಮಾಡುತ್ತಾನೆ.)

ವಸಂತ—ಪ್ರಿಯೇ ಮಲಕಾ, ಇಕೋ, ಸ್ವಲ್ಪ ರುಚಿ ನೋಡೆ ?

ಮಲಕಾ—ನಾನು ಒಲ್ಲೆನು. ನನಗೆ ಜುಲುಮೆ ಮಾಡಬೇಡಿರಿ.

ವಸಂತ—ಸ್ವಲ್ಪ, ನನ್ನ ಮಾತನ್ನಂತು ಕೇಳು. ಅಮೃತವು ಇದಕ್ಕೆ ಸಾಷ್ಟಾಂಗ ಹಾಕಿ ಜಯಪತ್ರ ಕೊಟ್ಟಿತಂತೆ, ಅಂಥ ಈ ಮದಿರೆಯನ್ನು ಸೇವಿಸುವದಿಲ್ಲವೇ? ನಿನಗೆ ಎಂಥ ಹುಚ್ಚಿಯನ್ನಬೇಕು. (ಅವಳಿಗೆ ಕುಡಿಸಲಿಕ್ಕೆ ಹೋಗುತ್ತಾನೆ.)

ಮಲಕಾ—ಇದೇನು ವಸಂತರಾಯರೇ ? ನಾನು ಕುಡಿಯುವದಿಲ್ಲ. ನೀವು ನನಗೆ ಜುಲುಮೆ ಮಾಡಬೇಡಿರಿ. (ಮನೋಹರನಿಗೆ) ಕುಡಿಸುವ ನೆವದಿಂದ ನನ್ನ ಮೈಮೇಲೆ ಬರುತ್ತಾರೆ. ಇದೇನು ಚಂದ ?

ವಸಂತ—(ತನ್ನಷ್ಟಕ್ಕೆ) ಗಜರೆಯು ನನಗೆ ಎಂಥ ಘಾತಕಳಾಗಿ ಹುಟ್ಟಿರಬಹುದು? ಈಹೊತ್ತು ಮುಂಜಾವಿನಲ್ಲಿ ನನ್ನ ಉಂಗುರವನ್ನೂ ಹಣದ ಚೀಲವನ್ನೂ ತಕ್ಕೊಂಡು ತನ್ನಹತ್ತರ ಇಟ್ಟುಕೊಂಡಳು. ಅವು ಈಗ ನನ್ನಹತ್ತರ ಇದ್ದರೆ ಇವಳನ್ನು ಒಂದು ಕ್ಷಣದಲ್ಲಿಯೇ ಸುಮ್ಮನಿರಿಸುತ್ತಿದ್ದೆನು.

ಮನೋ.—ವಸಂತರಾಯಾ, ನೀನು ಅವಳ ಗೊಡವೆಗೆ ಹೋಗಬೇಡ? ಕುಡಿಯುವದಿಲ್ಲೆಂದಮೇಲೆ ತೀರಿತು. ಆಗ್ರಹವನ್ನೇಕೆ ಮಾಡುವಿ.

ಹೇಮಂತ—ಯಾಕೆ? ವಸಂತನು ಅವಳಿಗೆ ಆಗ್ರಹಮಾಡಿದರೆ ನಿನಗೆ ಬರಿಷಣವಾಯಿತೇನು ?

ವಸಂತ—ಮಲಕಾ ನಿನಗೆ ಬೇಡಾದರೆ ಬಿಟ್ಟುಬಿಡು. ಕುಡಿಯಬೇಡ ನಾನಾದರು ಕುಡಿಯುವೆನು.

ಮಲಕಾ—ನೀವು ಕುಡಿಯಿರಿ, ನಿಮಗೆ ಯಾರು ಬೇಡೆನ್ನುವರು.

ವಸಂತ—ಹಾಗಲ್ಲ. ಇತ್ತ ಸಮೀಪಕ್ಕೆ ಬಾ. ಒಂದು ಮಾತನ್ನು ಹೇಳುವೆನು.

ಮಲಕಾ—ಏನು ಹೇಳುವಿರಿ? (ಸಮೀಪಕ್ಕೆ ಹೋಗುತ್ತಾಳೆ.)

ವಸಂತ—ಇಕೋ, ಈ ಸರಾಯಿಯು ಹೆಚ್ಚುರುಚಿಕರವೋ ನಿನ್ನ ಅಧರಾಮೃತವು ಹೆಚ್ಚುರುಚಿಕರವೋ? ನೋಡೋಣ. (ಹೀಗೆಂದು ಮುದ್ದುಕೊಡುತ್ತಾನೆ.)

ಮನೋಹರ-ಎಲಾ ವಸಂತಾ, ಜೋಕೆ ಮಲಕೆಯು ನನ್ನವಳು. ಅವಳಕೂಡ ಈ ರೀತಿಯ ಚೇಷ್ಟೆಕುಚೇಷ್ಟೆಗಳನ್ನು ಯಾರೂ ಮಾಡಕೂಡದು.

ಹೇಮಂತ—(ಮನೋಹರನಿಗೆ) ಎಲಾ, ಹೀಗೆಯಾಕೆ? ಒಮ್ಮಿಂದೊಮ್ಮೆಲೇ ಸಿಟ್ಟಿಗೇಳುವಿ? ಪಿತ್ತವು ತಲೆಗೇರಿತೇನು ?

ವಸಂತ—ಪಿತ್ತವೇನು ತಲೆಗೇರೀತು? ಸರಾಯಿಯು ತಲೆಗೇರಿರುವದು. (ಮಲಕೆಗೆ) ಪ್ರಿಯೇ ಬಾ. ನಿನಗೆ ಆ ಕುಡಕನ ಸಂಗತಿ ಬೇಡ.

ಮಲಕಾ—(ತನ್ನಷ್ಟಕ್ಕೆ) ತಾವು ಕುಡಿಯದವರಹಾಗೇ ಮಾತಾಡುವರು.

ಮನೋ.—ಎಲಾ ನೀನು ಅವಳಕೂಡ ಮಾತಾಡಿದೆಂದರೆ ಬಾಯಿಗೆ ಚಂಡು ತುರಿಕೇನು. ಸರಿ, ದೂರಸರಿ, ಮುಂದಿಯ ಹೆಂಗಸರ ಮೈ ಮೇಲೆ ಹೋಗುವ ಇಂಥ ಅಧಮರನ್ನು ಗಲ್ಲಿಗೇರಿಸಬೇಕು. ಬಾ ಮಲಕಾ, ಇತ್ತಬಾ.

ವಸಂತ—ಎಲಾ ಮೂಢಾ ಬಾಯಿಗೆ ಬಂದಂತೆ ಬೊಗಳಬೇಡ, ನಿನ್ನ ನಾಲಿಗೆಯನ್ನು ಕತ್ತರಸಿ ಹೋಳು–ಹೋಳು ಮಾಡೇನು. ನಿಜವಾಗಿ ಹೇಳು, ನಾನೂ ನೀನೂ ಮುಂದಿಯೇ?

ಮನೋ.—ಏನು ಹಾಗೆ ಬೊಗಳಿದರೆ? ಮೊದಲು ಇವಳ ಕೈಬಿಡು.

ವಸಂತ—ನಾನು ಬಿಡುವದಿಲ್ಲ. ಮಲಕಾ ಅವನಕಡೆಗೆ ಹೋಗಬೇಡ. ಇಂದಿನಿಂದ ನೀನು ನನ್ನವಳು.

ಮನೋ—ಬಿಡದಿದ್ದರೆ ನಿನ್ನ ಕೈಯು ತುಂಡುತುಂಡಾಯಿತೆಂದು ತಿಳಿ, ನೋಡು. ( ಚೂರಿಯನ್ನು ಹೊರಗೆ ತೆಗೆಯುತ್ತಾನೆ. )

ವಸಂತ—ನನ್ನ ಕೈಯು ತುಂಡಾಗುವದಕ್ಕಿಂತ ಮೊದಲು ಒಂದು ಕ್ಷಣದಲ್ಲಿ ಮನೋಹರನು ಭೂಮಿಯಮೇಲೆ ಇದ್ದನೋ ಇಲ್ಲವೋ ಎನ್ನುವ ಹಾಗೆ ಮಾಡುವೆನು ನೋಡು. ನಿನಗೆ ಜೀವದ ಆಶೆಯಿದ್ದರೆ, ಶರಣು ಬಂದು ಇವಳನ್ನು ನನಗೆ ಬಿಟ್ಟುಬಿಡು. ಇಲ್ಲದಿದ್ದರೆ ನೆನೆಸುವದನ್ನು ನೆನೆಸಿಕೋ. ( ಪಿಸ್ತೂಲನ್ನು ಗುರಿಹಿಡಿಯುತ್ತಾನೆ. )

ಮನೋ.—ಸರಿ ಮಲಕಾ ದೂರಸರಿ ಇವನು ಏನು ಅನ್ನುವನೋ ನೋಡುತ್ತೇನೆ. ( ವಸಂತನಿಗೆ ) ನಾನು ಹೇಡಿಗೆ ಶರಣುಬರುವವನಲ್ಲ. ನಿನ್ನಂಥ ಅಧಮನ ಎದೆ ಸೀಳಿ ಸುರಾಪಾನ ಮಾಡಿದಂತೆ ರಕ್ತವನ್ನು ಕುಡಿದು, ಉಕ್ಕೇರುವವನು. (ಒಬ್ಬರಿಗೊಬ್ಬರು ಹೊಡಿಯಲಿಕ್ಕೆ ಹೋಗುತ್ತಾರೆ, ಹೇಮಂತನು ಬಂದು ಬಿಡಿಸುತ್ತಾನೆ.)

ಹೇಮಂತ—ವಸಂತಾ ಏನು ಇದು ಅನರ್ಥವು! ಈ ಕ್ಷುದ್ರ ಹೆಣ್ಣಿನಸಲುವಾಗಿ ಸ್ನೇಹಿತರು ಪರಸ್ಪರರ ಪ್ರಾಣಹರಣಕ್ಕೆ ಸಿದ್ಧರಾಗಬೇಕೇ? ಛೆ! ಮನೋಹರಾ, ನಿನಗಾದರೂ ಹೇಗೆ ನಾಚಿಕೆ ಬರುವದಿಲ್ಲ. ಈ ಕೀಳಜಾತಿಯ ವೇಶ್ಯೆಯನ್ನು ಮೇಲುಗಟ್ಟಿಕೊಂಡು, ನಿನ್ನ ಗೆಳೆಯನ ರಕ್ತವನ್ನು ಕುಡಿಯಲಿಕ್ಕೆ ಸಿದ್ಧನಾಗುವಿಯಾ?

ಮನೋ.—ಮಲಕೆಯು ಈಗ ಇವನಿಗೆ ಬೇಕಾದಳೇನೋ? ಬುದ್ಧಿ ಹೇಳಬಂದಿರುವನು.

ಹೇಮಂತ—ಈಕೆಯನ್ನು ಕಟ್ಟಿಕೊಂಡು ನಾನೇನು ಮಾಡಲಿ? ಇವಳ ಮೋರೆಗೆ ಬೆಂಕೀಹಚ್ಚು.

ಮಲಕಾ—(ಹೇಮಂತನಿಗೆ) ಯಾಕೋ? ಬೇಕಾದರೆ ನಿನ್ನಮೋರೆಗೆ ಹಚ್ಚಿಕೊ. ಸುಮ್ಮನಿದ್ದವಳ ಕಾಲುಕೆರರಿ ಜಗಳತೆಗೆಯುವ ಕಾರಣವೇನು?

ಹೇಮಂತ—ಮೊದಲು ನೀನು ಇಲ್ಲಿಗೆ ಬಂದಕಾರಣವೇನು ಸ್ನೇಹಿತರೊಳಗೆ ಒಡಕು ಹುಟ್ಟಿಸಲಿಕ್ಕೆ? ನಡೆ, ಹೊರಗೆ ಹೋಗು.

ಮಲಕಾ—ನಾನೇನು ಉಡಾಪಿಯಂತೆ ಬಂದಿಲ್ಲ. ಬರತಕ್ಕವರಕೂಡ ಬಂದಿರುವೆನು. ಮನೋಹರನು ಎಲ್ಲಿರುವನೋ ಅಲ್ಲಿ ನಾನಾದರೂ ಇರುವವಳೇ.

ಹೇಮಂತ—ಚುಪ್ಪ! ಹೆಚ್ಚಿಗೆ ಮಾತಾಡಬೇಡ ಮೊದಲು ಹೊರಗೆ ನಡೆ. ಮುಕುಂದಾ (ಮುಕುಂದನು ಒಳಗೆ ಬರುತ್ತಾನೆ.) ಇವಳನ್ನು ಹೊರಗೆ ದೂಡೋ.

ಮುಕುಂದ—(ಮಲಕೆಗೆ) ನಡಿ ಚಲಾವ (ಅವಳನ್ನು ನುಗಿಸಿ ಒದೆಯುತ್ತಾನೆ.)

ಮನೋ.—(ಮುಕುಂದನಿಗೆ) ನೀನು ದೂರಸರಿದು ಮಾತಾಡು. ಎಷ್ಟಾದರೂ ನೀನು ಸೇವಕನು. ನಮ್ಮ ಜಗಳದೊಳಗೆ ನೀನು ಬರಬೇಡ. ಮಲಕೀ ನಡೆ ಹೋಗೋಣ. ಈ ಹೊತ್ತು ನಾವು ಎದ್ದ ವೇಳೆಯು ನೆಟ್ಟಗಿಲ್ಲ. ಎಲ್ಲಿ ಹೋದಲ್ಲಿ ಜನರು ನಮ್ಮ ಕೂಡ ಜಗಳವನ್ನೇ ಹೂಡುತ್ತಾರೆ (ಇಬ್ಬರೂ ಹೋಗಹತ್ತುತ್ತಾರೆ.)

ಹೇಮಂತ—(ಮನೋಹರನಿಗೆ) ನೀನು ಬೇಕಾದರೆ ಕೂಡ್ರು ಆ ಚಾಂಡಾಲೆಯು ಮಾತ್ರ ಹೋಗಲಿ.

ಮಲಕಾ—ಮನೋಹರಾ ನಿನ್ನನ್ನುಬಿಟ್ಟು ನಾನೊಬ್ಬಳೇ ಹೋಗುವದಿಲ್ಲ.

ಮನೋ.—(ಹೇಮಂತನಿಗೆ) ಇರಲಿ. ದೊಡ್ಡ ಉಪಕಾರವಾಯಿತು ಮಹಾರಾಜ, ಹೋಗಿಬರುವೆನು.

ಹೇಮಂತ—ಹಾಗಾದರೆ ದಯಮಾಡಿಸಿರಿ (ಮಲಕೆಯು ಮುಂದೆ ಹೋಗುತ್ತಾಳೆ ಮನೋಹರನು ಹಿಂಬಾಲಿಸುತ್ತಾನೆ.)

ವಸಂತ—ಅಯ್ಯೋ! ಮಲಕೆಯು ನನ್ನಕೈಗೆ ಸಿಗಲಿಲ್ಲವಲ್ಲ! ಹೋದಳು. ಇನ್ನೇನು ಮಾಡಲಿ!

ಹೇಮಂತ—(ವಸಂತನಿಗೆ) ಹುಶ್! ಸುಮ್ಮನಿರು. ಮುಕುಂದಾ (ಕೈಸೊನ್ನೆಮಾಡುತ್ತಾನೆ.)

ಮುಕುಂದ—(ಒಳಗೆ ಬಂದು) ಮನೋಹರರಾವ, ಮನೋಹರರಾವ, ತುಸು ನಿಲ್ಲಿರಿ.

ಮನೋ.—ಯಾಕೋ? ಏನು ಕೆಲಸ?

ಮುಕುಂದ—ನಿನ್ನಿನರಾತ್ರಿ ನನಗೆ ಕೊಡಲೊಪ್ಪಿದ ವಸ್ತವನ್ನು ಕೊಟ್ಟು ಬಿಡಿರಿ.

ಮನೋ.—ಒಳ್ಳೇದು, ಕೊಡುವೆನು ಆದರೆ ನನ್ನ ವಚನವು ಗುಪ್ತವಾದ ಸಂಗತಿಯಾಗಿರುವದರಿಂದ ಇದು ಕೇಳತಕ್ಕ ಸ್ಥಳವಲ್ಲ. ಮೇಲಾಗಿ ಆ ವಸ್ತುವು ಈಗ ನನ್ನ ಬಳಿಯಲ್ಲಿಲ್ಲ. ನಾಳಿನವರೆಗೆ ತಡೆ. ಅಂದರೆ ಕೊಡುವೆನು.

ಮುಕುಂದ—ಛಿ! ಛಿ! ಆದು ಆಗದಮಾತು. ಇದೇ ಈಗ ಒಬ್ಬರನ್ನೊಬ್ಬರು ಕೊಲ್ಲಲಿಕ್ಕೆ ನಿಂತಿದ್ದಿರಿ. ನಾಳಿಗೆಂದರೆ ಸಾಯುವವರಾರೋ ಬದಕುವವರಾರೋ.

ಮನೋ.—ಈಗ ಇಲ್ಲ.

ಮುಕುಂದ—ಛಿ! ಛಿ! ಆ ಮಾತು ಆಗದು. ಕೊಟ್ಟೇ ಮುಂದಕ್ಕೆ ಹೆಜ್ಜೆ ಇಡಲಿಕ್ಕೆ ಬೇಕು.

ಮಲಕಾ—(ಒಳಗೆ ಬಂದು) ಮನೋಹರಾ, ಬಾ ತಡವಾಯಿತು.

ಮನೋ—ಹಾ! ಬರುವೆ ನೀನು ತುಸು ಮುಂದೆ ನಡೆ.

ಮಲಕಾ—ಅದು ನನ್ನಿಂದಾಗಲಿಕ್ಕಿಲ್ಲ ಈ ದುಷ್ಟರು ಏನು ಮಾಡಿಯಾರೋ ನಿಯಮವಿಲ್ಲ

ಮುಕುಂದ—(ಮನೋಹರನಿಗೆ) ಕೊಡಿರಿ ನನಗೆ ಕೊಡತಕ್ಕ ಒಡವೆಗಳನ್ನು ಕೊಟ್ಟುಬಿಡಿರಿ.

ಮನೋ.—ಇಲ್ಲ. ಈಗ ಕೊಡುವದಿಲ್ಲ ನಾಳಿಗೆ ಕೊಡುವೆನು.

ಮುಕುಂದ—ನಾನು ಬಿಡುವದಿಲ್ಲ.

ಮಲಕಾ—(ಮುಕುಂದನಿಗೆ) ಏನು ಮನೋಹರನು ನಿನಗೇನು ಕೊಡಬೇಕಾಗಿರುವದು?

ಮನೋ.—( ಮಾಲಕಿಗೆ ) ಏನಿಲ್ಲ. ಏನಿಲ್ಲ ನೀನು ಸುಮ್ಮನೆ ಮುಂದೆ ನಡೆ.

ಮುಕುಂದ—ಅದೆಲ್ಲ ಹೇಳಿದರೆ, ನೀನು ಇಲ್ಲಿಯೇ ಜೀವ ಬಿಡುವಿ. ಸುಮ್ಮನೇ ನಿನ್ನ ಹಾದೀ ಹಿಡಿದು ಮನೆಗೆ ಹೋಗು.

ಮನೋ—( ಮುಕುಂದನ ಕಿವಿಯಲ್ಲಿ ) ಮುಕುಂದಾ, ನಾಳಿಗೆ ನಾನು ಬಂದು ಕೊಡಲೊಪ್ಪಿದಲ್ಲಿ ಎರಡು ವಸ್ತಗಳನ್ನು ಕೊಡುವೆನು. ನಿನ್ನ ಕೈಕಾಲು ಕಟ್ಟಿಕೊಳ್ಳುತ್ತೇನೆ. ಈಗ ಮಾತ್ರ ನನ್ನನ್ನು ಬಿಡು. ಕೇಳಬೇಡ.

ಮುಕುಂದ—ಛೀ! ಛೀ! ಛೀ! ಛೀ! ಆ ಮಾತೇ ಆಗದು. ನಿನ್ನಿನ ರಾತ್ರಿಯಲ್ಲಿಯೇ ನಿನ್ನನ್ನು ಬಿಟ್ಟೆನು ಅದೇ ನನ್ನ ದೊಡ್ಡತಪ್ಪಾಯಿತು. ಈಗ ಬಿಟ್ಟರೆ, ಇನ್ನೊಮ್ಮೆ ಎಂದಾದರೂ ನನ್ನಕೈಗೆ ಸಿಕ್ಕೀಯಾ?

ಮನೋ.—( ತನ್ನಷ್ಟಕ್ಕೆ ) ಈ ಮೂವರೂಕೂಡಿ ನನ್ನಮೇಲೆ ಏನೋ ಒಂದು ಸಂಕಟವನ್ನು ತಾದಂತೆ ತೋರುತ್ತದೆ. ಆಗಲಿ ಏನೇನು ಮಾಡುವರು ಮಾಡಲಿ.

ಮುಕುಂದ—ಹಾ! ಯಾಕೆ? ಸುಮ್ಮನೇ ಕುಳಿತಿ? ಕೊಟ್ಟುಬಿಡು.

ಮನೋ.—ಮುಕುಂದಾ, ನಾನು ನಿನ್ನದೇನೂ ಸಾಲ ಕೊಡಬೇಕಾಗಿಲ್ಲ. ವ್ಯರ್ಥವಾಗಿ ನನ್ನನ್ನು ಪೀಡಿಸಬೇಡ. ಕೈಬಿಡು ಹೋಗುವೆನು.

ಮುಕುಂದ—( ಹೇಮಂತನಿಗೆ ) ನೋಡಿರಿ, ರಾವಸಾಹೇಬ್ ಇವನು ಎಂಥ ನೀಚನು? ಬಡವನಿಗೆ ಕೊಡತಕ್ಕದ್ದನ್ನು ಮುಣಗಿಸಬೇಕೆಂದು ಹವಣಿಸುತ್ತಾನೆ. ತುಸು ಹೊತ್ತಿನಹಿಂದೆ ನಾಳೆಗೆ ಕೊಡುವೆನು ಈಗ ಇಲ್ಲ ಎಂದು ಅಂದದ್ದು ನೀವೇ ಕೇಳಿರಬಹುದು. ಆದರೆ ಈಗ, ನನ್ನದೇನೂ ಸಾಲ ಕೊಡತಕ್ಕದ್ದಿಲ್ಲವಂತೆ ಕೇಳಿರಿ ಉಪ್ಪುಂಡು ಸಪ್ಪಗೆನ್ನುವ ಜಾತಿ ( ಮನೋಹರನಿಗೆ ) ಎಲಾ ನಿಲ್ಲು ನಿಲ್ಲು, ಅಲ್ಲೆಲ್ಲಿ ಪಾರಾಗುತ್ತಿ.

ಮನೋ.—ನೀನು ಏನು ಮಾಡುವವನಿರುವಿಯೋ ಮಾಡು. ನಾನು ಮಾತ್ರ ನಿನಗೆ ಏನೂ ಕೊಡತಕ್ಕದ್ದಿಲ್ಲ ಎಂಥ ಅಂಜಿಕೆ ಹಾಕಿದರೂ ನಿನಗೆ ಏನೂ ಸಿಗಲಿಕ್ಕಿಲ್ಲ.

ಮುಕುಂದ—ನಾನು ತಕ್ಕೊಂಡೇ ಬಿಟ್ಟೇನು. ಒಳ್ಳೇ ಮಾತಿನಿಂದ ಕೊಡು. ಇಲ್ಲದಿದ್ದರೆ ನೋಡು. [ ಬಡಿಗೆಯನ್ನು ಮೇಲಕ್ಕೆತ್ತುತ್ತಾನೆ. ]

ಮನೋಹರ—ನೀನು ಮಾಡುವದಾದರೂ ಏನು? ಬಾ, ಮುಂದೆ ಬಾ, ( ಮುಕುಂದನು ಮನೋಹರನನ್ನು ಹೊಡೆಯುಹತ್ತುತ್ತಾನೆ. )

ಮನೋಹರ—ಅಯ್ಯಯ್ಯೋ! ಅಯ್ಯಯ್ಯೋ! ಮಲಕಾ !! ಇಂದು ನಾನು ಬದಕುವ ಆಶಾ ಇಲ್ಲ- ನೀನು ಮಾತ್ರ ಯಾರಿಗಾದರೂ ಮರೆಹೊಕ್ಕು ಪ್ರಾಣವನ್ನು ಉಳಿಸಿಕೋ ಅಯ್ಯಯ್ಯೋ! ( ಅಳುತ್ತಾನೆ. )

ಮಲಕಾ—ಮುಕುಂದಾ ತುಸು ತಡೆ. ಮನೋಹರನು ನಿನಗೆ ಏನು ಕೊಡಬೇಕಾಗಿದೆ.

ಮುಕುಂದ—ಹುಚ್ಚಹಾದರಗಿತ್ತೀ, ವಸ್ತಗಳನ್ನು ಕೊಡತಕ್ಕದ್ದದೆ.

ಮಲಕಾ—ಇಕೋ, ಈಗ ನನ್ನ ಮೈಮೇಲೆ ಇರುವ ಎಲ್ಲ ಆಭರಣಗಳನ್ನು ತಕ್ಕೊ. ಮನೋಹರನನ್ನು ಬಡಿಯಬೇಡ ಮಾತ್ರ. ( ಆಭರಣಗಳನ್ನು ಉಚ್ಚಿಕೊಡುತ್ತಾಳೆ. )

ಮುಕುಂದ— ಇವಲ್ಲ. ಇವುಗಳಿಗಿಂತಲೂ ಹೆಚ್ಚಿನ ಬೆಲೆಯುಳ್ಳ ಆಭರಣಗಳನ್ನು ಕೊಡುವೆನೆಂದು ಹೇಳಿದ್ದನು.

ಮಲಕಾ—ಹಾಗಾದರೆ ನಾಳೆಗೆ ನಮ್ಮ ಅವ್ವನು ಬಂದಮೇಲೆ ಅವಳ ಕಡೆಯಿಂದ ಪೆಟ್ಟಿಗೆಯ ಕೀಲಿಕೈಯನ್ನು ತಕ್ಕೊಂಡು ನಿನಗೆ ಯಾವ ಆಭರಣವು ಬೇಕೋ ಅದನ್ನು ಕೊಡುವೆನು. ಸುಮ್ಮನಿರು. ಈಗ ಮಾತ್ರ ಮನೋಹರನನ್ನು ಬಡಿಯಬೇಡಪ್ಪಾ. ನಿನ್ನ ಕಾಲು ಬೀಳುತ್ತೇನೆ.

ಮುಕುಂದ—ಇನ್ನೆಲ್ಲಿಯ ನಿಮ್ಮವ್ವ!

ಮಲಕಾ—( ದುಃಖಿಸುತ್ತ ) ಏನು ? ಏನಾಯಿತು ? ಮುಕುಂದಾ ಸ್ಪಷ್ಟವಾಗಿ ಹೇಳು, ನಮ್ಮ ಅವ್ವನನ್ನು ಎಲ್ಲಿ ಬಿಟ್ಟುಬಂದಿರಿ.

ಹೇಮಂತ—ಏನೋ ಮುಕುಂದಾ, ಮನೋಹರನು ನಿನಗೆ ಏನು ಕೊಡಬೇಕಾಗಿರುವದು? ಮಲಕಾ ನೀನು ಅಳುವಿಯೇಕೆ?

ಮನೋಹರ—( ತನ್ನಷ್ಟಕ್ಕೆ ) ಈ ನೀಚನೊಬ್ಬನು ಏನೂ ಗೊತ್ತಿಲ್ಲದವರ ಹಾಗೆಯೇ ಕೇಳುತ್ತಾನೆ. ಈ ಕ್ಷಣಕ್ಕೆ ಎಲ್ಲ ಗ್ರಹಗಳು ನನ್ನ ಮೇಲೆ ತಿರುಗಿದಂತೆ ಕಾಣುತ್ತವೆ. ಆದರೂ ಧೈರ್ಯ ಬಿಡಬಾರದು.

ಮಲಕಾ—ಮುಕುಂದಾ, ನಿನಗೆ ಶಿರಗೊಡ್ಡಿ ಬೇಡಿಕೊಳ್ಳುವೆನಪ್ಪಾ ಏನಾಯಿತು? ಸ್ಪಷ್ಟವಾಗಿ ಎಲ್ಲಾ ಹೇಳು. ನನ್ನ ತಾಯಿಯು ಎಲ್ಲಿರುವಳು?

ಮುಕುಂದಾ—ಕೇಳು. ನಿನ್ನಿನ ರಾತ್ರಿ ಇಲ್ಲಿಗೆ ಬರುವಾಗ ಉಗಿಬಂಡಿಯಲ್ಲಿ ಈ ಮನುಷ್ಯನೇ ನಿನ್ನ ತಾಯಿಯನ್ನು ಕೊಂದು

ಮಲಕಾ—ಅಯ್ಯಯ್ಯೋ! ಅವ್ವಾ! ಈ ಜನ್ಮಕ್ಕಿರುವ ಆಧಾರವು ಇಲ್ಲದಂತಾಯಿತೇ! ಅವ್ವಾ ನನ್ನನ್ನು ಯಾರ ಕೈಯ್ಯಲ್ಲಿಕೊಟ್ಟು ಹೋದಿ. ಈ ಅನಾಥಳನ್ನು ಯಾರು ಕಾಪಾಡ್ಯಾರು! ಅವ್ವಾ! ( ಅಳುತ್ತಾಳೆ )

ಹೇಮಂತ—ಅಯ್ಯೋ! ಪಾಪ! ಆ ಬಡಪ್ರಾಣಿಯ ಜೀವಹರಣಕ್ಕೆ ನಿನ್ನ ಕೈಗಳಾದರೂ ಹೇಗೆ ಎದ್ದವೋ! ಎಲಾ ಮನೋಹರಾ, ನೀನು ನಿಜವಾಗಿ ರಾಕ್ಷಸನು ಮನುಷ್ಯನಲ್ಲ. ಮಲಕಾ ಏಳು ಅಳಬೇಡ ನಾಳಿಗೆ ಇವನ ಪಾರುಪತ್ಯವನ್ನು ಪೋಲೀಸರ ಕೈಯಿಂದ ಚನ್ನಾಗಿ ಮಾಡಿಸೋಣ.

ಮಲಕಾ—ಎಲಾ ಚಾಂಡಾಲಾ ಮನೋಹರಾ ನಂಬಿದವಳ ಕುತ್ತಿಗೆಯನ್ನು ಕೊಯ್ದಿಯಾ? ಯಾವ ನರಕಕ್ಕೆ ಹೋಗುವಿಯೋ?

ಮನೊಹರ—ಮಲಕಾ, ನಿನಗೆ ಕೈಜೋಡಿಸಿ ಬೇಡಿಕೊಳ್ಳುವೆನು. ಶಾಂತ ಚಿತ್ತದಿಂದ ನನ್ನ ಮಾತನ್ನು ಮೊದಲು ಕೇಳಿಕೋ! ನಿನ್ನ ತಾಯಿಯ ಮರಣದ ಸುದ್ದಿಯನ್ನು ನಾನು ಕೇಳಿದ್ದು ಇದೇ ಮೊದಲನೇ ಸಾರೆ. ನಿನ್ನ ತಾಯಿಯ ಸಲುವಾಗಿ ನಿನಗೆ ಹ್ಯಾಗೆ ದುಃಖವಾಗಿರುವದೋ ಹಾಗೇ ನನಗಾದರೂ ಮಾತಾಡಲಿಕ್ಕೆ ಬಾರದಷ್ಟು ದುಃಖವಾಗಿರುವದು. ಅವಳ ಅಂತಃಕರುಣದ ಸ್ವಭಾವವೂ ಅವಳು ತಾಯಿಯಗಿಂತ ಹೆಚ್ಚಾಗಿ ಮಾಡುತ್ತಿದ್ದ ನನ್ನಮೇಲಿನ ಪ್ರೀತಿಯೂ, ನನಗೆ ಹಾಳುಮಾಡಬೇಡೆಂದು ಮೇಲಿಂದಮೇಲೆ ಅವಳು ಹೇಳುತ್ತಿದ್ದ ಎಚ್ಚರಿಕೆಯ ಮಾತುಗಳೂ; ಇವೆಲ್ಲವುಗಳು ನನ್ನ ಕಣ್ಣುಮುಂದೆ ಕಟ್ಟಿದಂತೆ ಇರುವತನಕಾ, ( ಅಳುತ್ತ ) ಅವಳ ಮೇಲೆ ನನಗೆ ಕೈ ಎತ್ತುವದಾದೀತೆ? ಹೇಳು, ಮಲಕಾ ನೀನೇ ತಿಳಿದು ಹೇಳು. ಇಷ್ಟೇ ಅಲ್ಲ. ಇಂಥ ದೊಡ್ಡ ಮನುಷ್ಯಳು ನಿಜವಾಗಿ ಇಂಥ ದುರ್ಮರಣಕ್ಕೆ ಗುರಿಯಾದಳೆಂದು ತಿಳಿದರೆ ಇದೇ ಸ್ಥಳದಲ್ಲಿ ದುಃಖವನ್ನು ತಾಳಲಾರದೆ ನನ್ನ ಜೀವವನ್ನು ಕೊಡಲಿಕ್ಕೆ ಸಿದ್ಧನಾದೇನು ( ಚೂರಿಯಿಂದ ಹೊಡೆದುಕೊಳ್ಳಲಿಕ್ಕೆ ಹೋಗುತ್ತಾನೆ. ಮಲಕೆಯು ಅದನ್ನು ಕಸಿದುಕೊಳ್ಳುತ್ತಾಳೆ ) ಹಾ! ಕಸಿದುಕೊಂಡದ್ದು ಒಳ್ಳೇದಾಯಿತು. ಹೆಂಗಸರಂತೆ ಸತ್ತಾದರೂ ಉಪಯೋಗವೇನು?

ಮುಕುಂದ—(ಹೇಮಂತನಿಗೆ) ಆಹಾಹಾ !! ರಾವಸಾಹೇಬ ಏನು, ನಾಟಕ ನಡೆದಿರುವದೆಂದರಿಲ್ಲಿ? ( ಮನೋಹರನಿಗೆ ) ಛೀ! ಬಿಡೋ! ಕಣ್ಣೊಳಗೆ ನೀರಿಲ್ಲ ಯಾಕೆ ಅಳುತ್ತಿ?

ಮಲಕಾ—ಹಾಗಾದರೆ ನನ್ನ ತಾಯಿಯು ಹ್ಯಾಗೆ ಸತ್ತಿರಬಹುದು?

ಮನೋಹರ—( ವಿಚಾರಿಸಿ ) ನನ್ನ ಮಾತಿನ ಮೇಲೆ ವಿಶ್ವಾಸವಿದ್ದರೆ ಹ್ಯಾಗೆ ಸತ್ತಿರಬಹುದೋ ಹೇಳುವೆನು ಕೇಳು. ಈ ಮೂವರು ನಮ್ಮಿಬ್ಬರೊಳಗೆ ಒಡಕು ಹುಟ್ಟಿಸಿ ಇಬ್ಬರಿಗೂ ಏನೋ ಒಂದು ಗಂಡಾಂತರವನ್ನು ತಂದಂತೆ ತೋರುತ್ತದೆ. ಒಡಕು ಹುಟ್ಟಿಸುವದರ ಉದ್ದೇಶವು, ನಿನ್ನ ಗಂಟನ್ನು ಎತ್ತಿ

ಹಾಕಬೇಕೆಂದಿರುವದೋ? ನನಗೆ ಘಾತಮಾಡಬೇಕೆಂದಿರುವದೋ? ಅಥವಾ ನಮ್ಮಿಬ್ಬರನ್ನು ಅಗಲಿಸಿ, ಇವರಿಬ್ಬರು ನಿನ್ನ ಮನಸ್ಸು ಒಲಿಸಿಕೊಳ್ಳಬೇಕೆಂದಿರುವದೋ, ನನಗೆ ಏನೂ ತಿಳಿಯದು. ಇಷ್ಟು ಮಾತ್ರ ನಿನಗೆ ಬೇಕಾದ ಆಣೇ ಮಾಡಿಹೇಳುವೆನು, ನಿನ್ನ ತಾಯಿಯು ಸತ್ತದ್ದೇ ನಿಜವಿದ್ದರೆ ಅವಳನ್ನು ಕೊಂದವರು ಇವರೇ ಇರಲಿಕ್ಕೆ ಬೇಕು.

ವಸಂತ, ಹೇಮಂತ, ಮುಕುಂದ—ಏ ಬದ್ಮಾಷ್, ಲುಚ್ಚಾ, ಹರಾಮಖೋರ್, ಸುಮ್ಮಸುಮ್ಮನೆ ನಮ್ಮ ಮೇಲೆ ಬರುವಿಯಾ? ಇಲ್ಲಿಯೇ ನಿನ್ನನ್ನು ಜೀವಂತ ಹುಗಿದೇವು.

ವಸಂತ—ಮಲಕಾ, ಅವನ ಮಾತು ಕೇಳಿದರೆ ನಿನಗೆ ಒಳ್ಳೇದಾಗ್ಲಿಕ್ಕಿಲ್ಲ. ಸುಮ್ಮನೆ ಇಲ್ಲಿ ಕುಳಿತುಕೊ ಅಳಬೇಡ.

ಮಲಕಾ—( ತನ್ನಷ್ಟಕ್ಕೆ ) ಮನೋಹರನು ಹೇಳಿದ್ದು ನಿಜವಿದ್ದರೂ ಇರಬಹುದು. ಯಾಕಂದರೆ, ಇಲ್ಲಿಗೆ ಬಂದಕೂಡಲೆ ವಸಂತನು ನನ್ನ ಕೂಡ ಅಲ್ಲದ ಚೇಷ್ಟೆಗಳನ್ನು ಮಾಡಹತ್ತಿರುವನು.

ಹೇಮಂತ—( ಮನೋಹರನಿಗೆ ) ನಡೆ, ನೀನು ಮೊದಲು ಹೊರಗೆ ನಡೆ.

ಮನೋ—ಬಾ, ಮಲಕಾ, ನಾವು ಹೋಗೋಣ.

ವಸಂತ—ಮಲಕೆಯನ್ನು ಬಿಡುವದಿಲ್ಲ. ನೀನೊಬ್ಬನೇ ಹೋಗು ನಡೆ. ( ಮಲಕೆಗೆ ) ಮಲಕಾ, ಹೋಗಬೇಡ. ಬಾಯಿ ಮುಚ್ಚು.

ಮಲಕಾ—( ತನ್ನಷ್ಟಕ್ಕೆ) ಅಯ್ಯೋ! ಮನೋಹರನು ಹೇಳಿದ್ದು ಸತ್ಯವು. ನನ್ನ ತಾಯಿಯನ್ನು ಈ ಚಾಂಡಾಲನೇ ಕೊಂದಿರಲಿಕ್ಕೆಬೇಕು. (ಪ್ರಕಾಶವಾಗಿ) ಎಲಾ ವಸಂತಾ, ಆ ಬಡಪ್ರಾಣಿಯನ್ನು ಕೊಲ್ಲಲಿಕ್ಕೆ ಅವಳು ನಿನಗೆ ಅಂಥಾದ್ದೇನು ಮಾಡಿದ್ದಳು ?

ವಸಂತ—ನನ್ನ ಮೇಲೆ ಸುಮ್ಮಸುಮ್ಮನೆ ಆರೋಪ ಹೊರಿಸಬೇಡ. ಆದದ್ದಾಗಿ ಹೋಗಿರುವದು. ಇನ್ನು ಮುಂದೆ ನನ್ನವಳಾಗಿ ಸುಮ್ಮನಿರು—

ಮಲಕಾ—ಎಲಾ ಕುತ್ತಿಗೆಗೊಯ್ಯಾ, ನಾನು ಎಂದಿಗೂ ನಿನ್ನ ಕೈ ಸೇರಲಿಕ್ಕಿಲ್ಲ. ಅಮ್ಮಾ ಈ ಯಮದೂತನು ನಿನಗೆಲ್ಲಿ ಮುಳುವಾಗಿ ಕುಳಿತಿದ್ದನೇ! ಎಲಾ ನೀನು ಏಳೇಳು ಜನ್ಮಕ್ಕೂ ತಾಯಿಯನ್ನು ಕಾಣಬೇಡ! ಹೆಂಗಸನ್ನು ಕೊಂದ ಪಾಪಕ್ಕೆಂದು ದೇವರು ನಿನ್ನನ್ನು ಸಾವಿರ ವರ್ಷ ನರಕದಲ್ಲಿಡಲಿ!

ವಸಂತ—ಎಲೇ, ರಂಡೇ ನಿನಗೆ ಜೀವವು ಎರವಾಗಿರುವದೋ ಏನು ? ಹೆಚ್ಚಿಗೆ ಬೊಗಳಬೇಡ ಬಾಯಿಮುಚ್ಚು !

ಮಲಕಾ—ಹೌದು ನನಗೆ ಜೀವವು ಎರವಾಗಿರುವದು. ನೀಚಾ, ಪಿಶಾಚಿ, ಚಾಂಡಾಲಾ, ನನ್ನ ತಾಯಿಯನ್ನು ಹೇಗೆ ಕೊಂದಿ ? ಪಾಪ ಅವಳು ನಿನಗೇನು ಮಾಡಿದ್ದಳು ?

ವಸಂತ—ನೀನು ಸುಮ್ಮ ಸುಮ್ಮನೆ ನನ್ನ ಮೇಲೆ ಬರಬೇಡ ನಾನು ಅವಳನ್ನು ಕೊಂದಿಲ್ಲ.

ಮಲಕಾ—ಹಾಗಾದರೆ ಬಂದಕೂಡಲೇ ನನ್ನ ಮೇಲೆ ಅಲ್ಲದ ಚೇಷ್ಟೆಗಳನ್ನು ಯಾಕೆ ಮಾಡಹತ್ತಿದಿ ?

ವಸಂತ—ಯಾಕೆ ಮಾಡಬಾರದು ? ನೀನು ವೇಶ್ಯೆಯು ನಿನಗೆ ಚೇಷ್ಟೆ ಮಾಡಲು ಯಾರಿಗೂ ಅಡ್ಡಿಯಿಲ್ಲ.

ಮನೋಹರ—( ಒಮ್ಮೆಲೇ ವಸಂತನಮೇಲೆ ಧುಮುಕಿ ) ಅವಳಿಗೆ ಚೇಷ್ಟೆ ಮಾಡಲು ಯಾರಿಗೂ ಅಡ್ಡಿಯಿಲ್ಲವೇ ? ಅದು ಹೇಗಿಲ್ಲವೋ ತೋರಿಸುವೆನು. ನಿಲ್ಲು. ( ವಸಂತನನ್ನು ನೆಲಕ್ಕೆ ಕೆಡವಲಿಕ್ಕೆ ಹೋಗುತ್ತಾನೆ ಕಿಸೆಯೊಳಗಿನ ವಸ್ತ್ರಗಳೂ ಪಿಸ್ತೂಲೂ ಹೊರಗೆ ಬೀಳುತ್ತವೆ )

ಮಲಕಾ--( ವಸ್ತ್ರಗಳನ್ನು ತೆಕ್ಕೊಂಡು ) ಅಯ್ಯೋ ! ಮನೋಹರಾ ಇವೇ ನನ್ನ ವಸ್ತ್ರಗಳು ! ನೀನು ಹೇಳಿದ್ದು ನಿಜವು ! ನಿಜವು ! ಇವನೇ ನನ್ನ ತಾಯಿಯನ್ನು ಕೊಂದವನು ! ( ವಸಂತನಿಗೆ ) ಎಲಾ ಕಟಕಾ ! ನಾನಾದರೂ ನಿನ್ನ ಜೀವವನ್ನು ತಕ್ಕೊಳ್ಳದೆ ಬಿಡಲಿಕ್ಕಿಲ್ಲ. ( ವಸಂತನ ಕುತ್ತಿಗೆಗೆ ಕೈಹಾಕುತ್ತಾಳೆ )

ವಸಂತ—ಹುಚ್ಚರಂಡೀ ನನ್ನ ಕುತ್ತಿಗೆ ಹಿಚಕುವಿಯಾ ? ಇಕೋ, ಇಷ್ಟಿಯೇ ನಿನ್ನನ್ನು ಯಮಸದನಕ್ಕೆ ಕಳುಹುವೆನು. ( ಪಿಸ್ತೂಲನ್ನು ಹಾರಿಸುತ್ತಾನೆ. ಮಲಕೆಯು ಸಾಯುತ್ತಾಳೆ. ಉಳಿದವರೆಲ್ಲರೂ ಗಾಬರಿಯಾಗಿ ಓಡಿಹೋಗುತ್ತಾರೆ. ಗಜರೆಯು ಮೂರ್ಛೆ ಬಂದು ನೆಲಕ್ಕೆ ಬೀಳುತ್ತಾಳೆ )

ವಸಂತ—( ಗಜರೆಯ ಹತ್ತರಬಂದು ) ಈ ಕುಲಕಂಟಕಳೊಬ್ಬಳು ಆದದ್ದನ್ನೆಲ್ಲ ನೋಡಲಿಕ್ಕೆ ಉಳಿದಿರುವಳೇನೋ ! ಏನೇ ಮೂಢಳೇ, ಈ ರೀತಿ

ಯು ತ್ರಾಸು ಕಡೆತನಕ ತಪ್ಪುವಂತೆ ನಿನಗೂ ಅಪ್ಪಣೆಕೊಡುವೆನು ಬಾ. ( ಅವಳನ್ನು ಹೊತ್ತುಕೊಂಡು ಹೋಗುತ್ತಾನೆ. )

ಹೀರಾ—( ಮುಂದೆ ಬಂದು ) ಅಯ್ಯೊ! ವಸಂತರಾಯರು ವಿಜಯವಿಠ್ಠಲನ ಗುಡಿಯಕಡೆಗೆ ಯಾಕೆ ಹೋಗುತ್ತಿರುವರು! ಅಕೋ! ಹಾಳು ದೇಗುಲದ ಒಳಗೆ ಹೊಕ್ಕರು! ಅಯ್ಯೊ! ಗಜರಾಬಾಯಿಯನ್ನು ಕುತ್ತಿಗೆ ಮುರಿದು ನದಿಯಲ್ಲಿ ಚಲ್ಲುವರೋ ಹಾಳುಗುಡಿಯಲ್ಲಿ ಬೀಸಾಡುವರೋ ಏನು! ದೇವರೆ ಎಂಥವೇಳೆ ತಂದಿ! ಅಮ್ಮನವರೇ ನಾನು ನಿಮ್ಮನ್ನು ಹ್ಯಾಗೆ ಬದುಕಿಸೇನು? ಒಳ್ಳೇದು ಈಗಿಂದೀಗಲೇ ಊರಿಗೆ ತಿರುಗಿಹೋಗಿ ಸಂಜೀವರಾಯನನ್ನು ಕರೆದುಕೊಂಡು ಬರುವೆನು. ( ಹೋಗುತ್ತಾಳೆ. )

---

## ಮೂರನೇ ಅಂಕವು.

### ೧ನೇ ಪ್ರವೇಶ.

ಸ್ಥಳ:—ವಿಜಯವಿಠ್ಠಲನ ಗುಡಿಯೊಳಗಿನ ಗುಹೆ.

( ಗಜರೆಯು ಮೂರ್ಛಿತಳಾಗಿ ಬಿದ್ದಿರುತ್ತಾಳೆ. ಅವಳ ಹತ್ತರ ಒಂದು ದೀಪ ಒಂದು ಪತ್ರ ಒಂದು ವಿಷದಬಟ್ಟಲ ಇಟ್ಟಿರುತ್ತದೆ. )

ಗಜರಾ—( ಮೂರ್ಛೆಯಿಂದ ಅರ್ಧ ಎಚ್ಚತ್ತು ) ಹೀರಾ, ಏನು ಭಯಂಕರ ಕೊಲೆಯಿದು! ಪ್ರಾಣನಾಥರು ಇಷ್ಟು ಕ್ರೂರರಿರುವರೆಂದು ನಾನು ಎಂದೂ ತಿಳಿಯಲಿಲ್ಲ. ಮಲಕಾ ಇನ್ನು ನಿನ್ನ ಕೂಡ ನನ್ನ ತಂಟೆಯಿಲ್ಲ. ಪರಲೋಕದಲ್ಲಿ ನಿನ್ನಾತ್ಮವು ಶಾಂತಿಯನ್ನು ಹೊಂದಲಿ ಹೀರಾ ನಡೆ ಇನ್ನು ಮನೆಗೆ ಹೊಗೋಣ ಇಲ್ಲಿ ಯಾಕೆ ಬಂದಿಯೆಂದು ಗದ್ದರಿಸಿದವರು ಯಾರು. ಹೀರಾ! ಹೀರಾ! ಎಲ್ಲಿಹೋದಿ? ಅಂಜಬೇಡ. ಬಾ ಹೋಗೋಣ. ಹೀರಾ, ( ಪೂರ್ಣವಾಗಿ ಎಚ್ಚತ್ತು ) ಅವ್ವಯ್ಯಾ! ಇದೇನು? ನನ್ನನ್ನು ಇಲ್ಲಿ ಯಾರು ತಂದುಬಿಟ್ಟರು! ( ಗಾಬರಿಯಾಗಿ ) ಹೀರಾ! ಹೀರಾ! ಎಲ್ಲಿಹೋದಿಯೇ ಅಯ್ಯಯ್ಯೋ! ಹೀರೆಯು ಹೋಗಿರುವಳು! ನನ್ನ ಹತ್ತರ ಯಾರೂ ಇಲ್ಲ! (ಸುತ್ತಲು ನೋಡಿ ) ಇದು ನಾವು ಇಳಿದುಕೊಂಡ ಸ್ಥಳವೂ ಅಲ್ಲ. ಮಲಕೆಯು ಕೊಲೆಯಾದ ಸ್ಥಳವೂ ಅಲ್ಲ. ಹಾಗಾದರೆ ಏನಿರಬಹುದು.?

ಇದೇನು ? ಇಲ್ಲಿ ಕಲ್ಲು ಮುಳ್ಳುಗಳೇಕೆ ಬಿದ್ದಿರಬಹುದು ? ಅಯ್ಯಯ್ಯೋ ! ಇಲ್ಲಿ ಭೂತಗಳೂ ಬ್ರಹ್ಮರಾಕ್ಷಸಗಳೂ ಸಂಚರಿಸುತ್ತಿದ್ದಾವಲ್ಲ ? ಶಿವ ಶಿವಾ ! ಇಂಥ ಸ್ಥಳದಲ್ಲಿ ನನ್ನನ್ನು ಯಾರು ತಂದು ಬಿಟ್ಟರು ? ಏನು ಮಾಡಲಿ ? ಪ್ರಾಣನಾಥರಿದ್ದೆಡೆಗೆ ನನ್ನನ್ನು ಯಾರು ಕಳಿಸಿಯಾರು ? ಪ್ರಾಣನಾಥರೇ ಎಲ್ಲಿರುವಿರಿ ! ಈಗಲೇ ಬಂದು ನನ್ನನ್ನು ಒಂದು ನಿರಾತಂಕವಾದ ಸ್ಥಳಕ್ಕೆ ಕರೆದೊಯ್ಯಬಾರದೇ ! ತಪ್ಪಾಯಿತು. ನಿಮ್ಮ ಮಾತನ್ನು ಕೇಳದೆ ವಿಜಯ ನಗರಕ್ಕೆ ನಾನು ಬಂದದ್ದು ಸರ್ವಥಾ ತಪ್ಪಾಯಿತು. ನನ್ನನ್ನು ಕ್ಷಮಿಸಿರಿ. ಇಲ್ಲಿಂದ ಮೊದಲು ನನ್ನನ್ನು ಕರಕೊಂಡು ಹೋಗಿರಿ. (ತುಸು ಹೊತ್ತು ಸುಮ್ಮ ನಾಗಿ ) ಅಥವಾ ನಾನು ಇಲ್ಲಿ ಇರುವದು ಅವರಿಗೆ ಗೊತ್ತುಂಟೋ ಇಲ್ಲವೋ ಇನ್ನೇನುಗತಿ ? ದೇವರೇ ನಿನ್ನ ಹೊರತು ನನ್ನನ್ನು ರಕ್ಷಿಸುವವರು ಯಾರೂ ಇಲ್ಲ. ಶಿವ ಶಿವಾ ( ಅಳುತ್ತಾಳೆ ) ಇರಲಿ. ಹೀಗೇ ಅಳುತ್ತ ಕುಳಿತರೇನಾಗು ವದು ? ಪಾಲಿಗೆ ಬಂದದ್ದನ್ನು ಅನುಭವಿಸಲಿಕ್ಕೆ ಬೇಕು. ನನಗೆ ಧೈರ್ಯ ಹೇಳುವವರಾರೂ ಇಲ್ಲ. ಆಗಲಿ ಬಂದದ್ದಕ್ಕೆಲ್ಲ ಎದುರಾಗುವೆನು ಹೊರಗೆ ಹೋಗಲಿಕ್ಕೆ ಏನಾದರೂ ಮಾರ್ಗವಿದ್ದರೆ ನೋಡೋಣ. ( ಸುತ್ತಲು ತಿರುಗಾ ಡುತ್ತ ನೋಡಿ ) ಇಕೋ ಇದೇ ಬಾಗಿಲವಿರಬಹುದು ( ಹತ್ತರಹೋಗಿನೋಡಿ ) ಅಯ್ಯೋ ! ಇದ್ದದ್ದೊಂದು ಬಾಗಿಲಕ್ಕೆ ಕಲ್ಲುಗಳನ್ನಾನಿಸಿರುವರು ! ಇನ್ನೇನು ಮಾಡಲಿ ! ಹೊರಗೆ ಹೋಗುವ ಆಶೆಯು ಯಾವ ಪ್ರಕಾರದಲ್ಲೂ ಉಳಿಯ ಲಿಲ್ಲ. ಇಲ್ಲಿಯೇ ನನ್ನ ಮರಣವು ನಿಶ್ಚಿತವು ಅಮ್ಮಾ-ನಮ್ಮ ಅವ್ವನೇಕೆ ನೆನ ಪಾದಳೇ ! ಅವ್ವಾ ಈ ವೇದನೆಗಳನ್ನೆಲ್ಲ ಇಂಥ ಚಿಕ್ಕ ವಯಸ್ಸಿನಲ್ಲಿ ಹ್ಯಾಗೆ ತಡೆಯಲೇ ! ನಾನು ಇಲ್ಲಿ ಅನ್ನ ನೀರಿಲ್ಲದೆ ಸಾಯುವಹೊತ್ತು ಬಂತು. ಅಮ್ಮಾ ನಾನು ಹೀಗೆ ಸಾಯುವೆನೆಂದು ನಿನ್ನ ಕನಸುಮನಸಿನಲ್ಲಿ ಸಹ ಬಂದಿರಲಿಕ್ಕಿಲ್ಲ. ಹ್ಯಾಗೆ ಬರಬೇಕು ? ಗಜರೆಯು ಇಂದು ಬಂದಾಳು; ನಾಳೆ ಬಂದಾಳು; ಬಂದ ಮೇಲೆ ಕೆಲವು ದಿವಸಗಳವರೆಗೆ ಅವಳನ್ನು ತವರಮನೆಗೆ ಕರೆದುಕೊಂಡು ಬರಬೇಕು. ಹೀಗೆ, ನೀನು ಯೋಚಿಸುತ್ತಿರುವಾಗ ಯಾವನೋ ಒಬ್ಬ ರಾಕ್ಷ ಸನು ನನ್ನನ್ನು ಈ ಕಾರಾಗೃಹದಲ್ಲಿ ಒಗೆದು ಕೊಲ್ಲುವನೆಂಬ ಕಲ್ಪನೆಯು ಹ್ಯಾಗೆ ಬರಬೇಕು? ಅಯ್ಯೋ ದುರ್ದೈವವೇ ! ನನ್ನ ಮರಣದ ಸುದ್ದಿಯು ಕಡಿದ ನನ್ನ ಬಂಧು ಬಳಗಕ್ಕೆ ಬೇಗ ಮುಟ್ಟುವಹಾಗಿಲ್ಲ ! ನನ್ನ ತಾಯಿಗೂ

ನನ್ನ ಸಹೋದರ ಸಮಾನನಾದ ಸಂಜೀವನಿಗೂ ಈ ದುಃಖದ ವಾರ್ತೆಯನ್ನು ಯಾರು ಹೇಳುವರು ? ಹೀರೆಯಂತೂ ಎಲ್ಲಿ ಹೋದಳೋ ಏನೋ ? ಪ್ರಾಣನಾಥರಿಗೂ ಯಾವದೂ ಗೊತ್ತಿರಲಿಕ್ಕಿಲ್ಲ. ಅಯ್ಯೋ! ಪರದೇಶಿಯಂತೆ ಯಾರಿಗೂ ತಿಳಿಯದಹಾಗೆ ಸಾಯುವ ಹೊತ್ತು ಬಂತೇ! ದೇವರೇ ಎಂಥ ವೇಳೆಯನ್ನು ತಂದಿ! ಏನು ಆಗುವದೋ ಆಗಲಿ. ಮರಣವು ಕರೆದರೇಕೆ ಬಂದೀತು ತನ್ನ ಕಾಲಕ್ಕೆ ತಾನೇ ಬರುವದು. ( ಕಣ್ಣುಗಳನ್ನು ತಿಕ್ಕೊಂಡು ನೋಡಿ ) ನನ್ನ ವೈರಿಗೆ ದೇವರು ಸ್ವಲ್ಪವಾದರೂ ಅಂತಃಕರಣವನ್ನು ಕೊಟ್ಟಂತೆ ತೋರುತ್ತದೆ. ಇದೇ ಆಶ್ಚರ್ಯವು, ಹಾಗಿಲ್ಲದಿದ್ದರೆ, ಇಲ್ಲಿ ದೀಪವನ್ನೇಕೆ ಇಡುತ್ತಿದ್ದನು? ಓಹೋ ! ಇದರಕೂಡ ಒಂದು ಪತ್ರವಿರುವದು ! ಇದನ್ನು ಓದಿಕೊಳ್ಳಬೇಕೆಂದು ದೀಪವನ್ನು ಇಟ್ಟಿರಬಹುದು. ( ಪತ್ರವನ್ನು ಒಡೆದು ನೋಡುತ್ತಾಳೆ ) ಇವು ಪ್ರಾಣನಾಥರ ಅಕ್ಷರಗಳಂತೆ ಕಾಣುತ್ತವಲ್ಲ ? ಇರಲಿ ಓದಿ ನೋಡೋಣ ( ಓದುತ್ತಾಳೆ )

“ ವಿಜಯನಗರಕ್ಕೆ ನಾನು ಹೊರಡುವಾಗ ನೀನು ಹಟಮಾರಿತನದಿಂದ ಅಡ್ಡಗಟ್ಟಿ ಮಾಡಿದ ಅಮಂಗಲವಾದ ಆಚರಣವೇ, ನನ್ನ ಪತ್ರದ ಮಂಗಲಾಚರಣವು :-- ಗಜರಾ, ನೀನು ನನ್ನ ದುಷ್ಕರ್ಮಪರಂಪರೆಯು ಪೂರ್ಣವಾಗಬೇಕೆಂದು ವಿಧಿಸಿದಂತೆ ತೋರುತ್ತದೆ. ಆದ ಸಂಗತಿಯನ್ನು ನಿನಗೆ ಹೇಳಬೇಕಾಗಿಲ್ಲವಷ್ಟೇ! ನೀನು ಎಲ್ಲವನ್ನು ನೋಡಿರುವಿ. ಈ ಎರಡು ಕ್ರೂರ ವಧೆಗಳಲ್ಲಿ ನಾನೊಬ್ಬನೇ ಆರೋಪಿಯಾಗಿದ್ದರೆ, ನಿನ್ನದೊಂದು ಕೂದಲವು ಸಹ, ಅಲುಕಗೊಡದ ಹಾಗೆ, ನಿನ್ನನ್ನು ಕ್ಷೇಮದಿಂದಿರಿಸಿ, ನಾನು ಮಾತ್ರ ಸಂತೋಷದಿಂದ ಗಲ್ಲಿಗೇರಿ ಹೋಗುತ್ತಿದ್ದೆನು. ಆದರೆ ಈ ಎಲ್ಲ ಕೃತ್ಯಗಳಲ್ಲಿ ನನ್ನಕೂಡ ನನ್ನ ಇಬ್ಬರು ಗೆಳೆಯರುಂಟು. ಹೆಂಗಸರಹೊಟ್ಟೆಯಲ್ಲಿ ಮಾತುಗಳು ನಿಲ್ಲುವದಿಲ್ಲ. ನೀನು ಒಂದುವೇಳೆ ಸಹಜವಾಗಿ ನಿನ್ನ ಗೆಳತಿಯರ ಮುಂದೆ ನಮ್ಮ ರಹಸ್ಯವನ್ನು ಹೇಳಿದೆಯಂದರೆ ಅಥವಾ ಕನಸಿನಲ್ಲಿಯೂ ಕೂಡ ಈ ಕೊಲೆಗಳ ವಿಷಯವಾಗಿ ಒಂದು ಶಬ್ದವನ್ನಾದರೂ ಉಸುರಿದರೆ ಇಲ್ಲವೆ ಈ ಘೋರಕರ್ಮವನ್ನು ಸ್ಮರಣೆಯಲ್ಲಿ ತಂದು ತುಸು ಅಂಜಿಕೆಯನ್ನಾದರೂ ವ್ಯಕ್ತಪಡಿಸಿದರೆ ಸಾಕು; ವಸಂತ ಹೇಮಂತ ಮನೋಹರರು ಅಂದಿಗೆ ಈ ಭೂಮಿಯಮೇಲೆ ಇಲ್ಲದಹಾಗೆ ಆಗುವರೆಂದು ತಿಳಿದುಕೋ ಈಗ ನಿನ್ನ

ದೊಂದು ಜೀವವನ್ನು ಕೊಟ್ಟು ನಮ್ಮ ಮೂವರ ಜೀವಗಳನ್ನು ಕೊಂಡುಕೊಂಡಿರುವೆವು. ಅಂದಮೇಲೆ ಸದ್ಯಕ್ಕೆ ನಮಗೆ ಮರಣದ ಭಯವಿಲ್ಲ. ನಿನಗೆ ಮೂರ್ಛೆಬಂದಾಗಲೇ ನಿನ್ನ ಪ್ರಾಣವನ್ನು ತಕ್ಕೊಳ್ಳಬೇಕೆಂದು ನನಗೆ ಹೊಳೆಯಿತು. ಆದರೆ ಆಗ ಧೈರ್ಯವಾಗಲಿಲ್ಲ. ಮೇಲಾಗಿ ನೀನು ಇಂದಿನವರೆಗೆ ನನ್ನ ಮೇಲೆ ಅವಿಚ್ಛಿನ್ನವಾಗಿ ಮಾಡಿದ ಪ್ರೇಮವು ಮೂರ್ತಿಮಂತವಾಗಿ ಬಂದು ಅಡ್ಡಗಟ್ಟಿತು. ವಿಜಯನಗರಕ್ಕೆ ಬರಬೇಡೆಂದು ನಾನು ನಿನಗೆ ಎಷ್ಟು ಹೇಳಿದೆನು! ನನ್ನ ಮಾತು ಕೇಳಿದರೆ ಈ ಹಾಡು ಆಗುತ್ತಿದ್ದಿಲ್ಲ ಆದದ್ದು ಆಗಿ ಹೋಯಿತು. ಇನ್ನು ನಿನ್ನ ಮರಣವು ನಿಶ್ಚಿತವು. ನೂರಾರುವರ್ಷಗಳವರೆಗೆ ಯಾವನೂ ಈ ಗುಹೆಯೊಳಗೆ ಕಾಲಿಟ್ಟಿಲ್ಲ ಇನ್ನು ಮುಂದೆ ನೂರಾರು ವರ್ಷಗಳವರೆಗೆಯಾದರೂ ಯಾವನೂ ಒಳಗೆ ಬರುವಸಂಭವವಿಲ್ಲ. ಈ ಕ್ಷಣದಿಂದಲೇ ನೀನು ಸತ್ತಿರುವಿಯೆಂದು ತಿಳಿದುಕೋ.

ಗಜರಾ, ನಾನು ನಿನಗೆ ಹೆಚ್ಚಿಗೇನು ಮಾಡುವದುಂಟು? ಅನ್ನನೀರುಗಳಿಲ್ಲದೆ ನೀನು ಕಳವಳಿಸಿ ಸಾಯಬಾರದೆಂದು, ಈ ಪತ್ರದ ಹತ್ತರ ವಿಷದ ಬಟ್ಟಲವನ್ನು ಇಟ್ಟಿರುವೆನು. ಅದನ್ನು ಕುಡಿದು ಸ್ತಬ್ಧವಾಗಿ ಮಲಗಿಕೋ. ಅಂದರೆ ನಿಶ್ಚಿಂತೆಯಿಂದ ಪ್ರಾಣಬಿಡುವಿ. ಮಲಕೆಯೇ ನನ್ನ ನಿಜವಾದ ಹೆಂಡತಿಯಾದ ಗಜರೆಯೆಂದು ಹೇಳಿ, ಅವಳ ಶವಕ್ಕೆ ವಿಧಿಪೂರ್ವಕವಾಗಿ ಸಂಸ್ಕಾರಮಾಡಿ, ಗಜರೆಯು ವಿಷಮ ಜ್ವರದಿಂದಸತ್ತಳೆಂದು ನಿನ್ನ ತಾಯಿಗೆ ಹೇಳಿ ಕಳುಹುವೆನು. ನಮ್ಮ ಊರೊಳಗೆ ಎಲ್ಲರೂ ಅದನ್ನೇ ನಂಬಿ ಸುಮ್ಮನಾಗುವರು. ಇರಲಿ ಗಜರಾ, ನನ್ನ ವಿಷಯವಾಗಿ ಈ ಹೊತ್ತಿಗೆ ನಿನಗೇನಾದರೂ ಅಸಹ್ಯವೆನಿಸಿರಬಹುದು. ಆದ್ದರಿಂದ ನನ್ನ ಪತ್ರವನ್ನು ಸಾಕು ಮಾಡುವೆನು ಹೋಗಿಬಾ.

ಪರಲೋಕದಲ್ಲಿ ನಿನ್ನನ್ನು ಪುನಃ ಕಾಣಲಿಚ್ಛಿಸುವ,

ವಸಂತ''

ಪ್ರಾಣನಾಥರೇ, ನೀವು ಈ ರಹಸ್ಯವನ್ನು ಯಾರಿಗೂ ಹೇಳಬೇಡೆಂದು ನನ್ನ ಕಡೆಯಿಂದವಚನ ತಕ್ಕೊಳ್ಳಬೇಕಾಗಿತ್ತು. ನಿಮ್ಮನ್ನು ಸ್ಮರಿಸಿ ಹೇಳುವೆನು ನಾನು ಯಾರಿಗೂ ಹೇಳುತ್ತಿದ್ದಿಲ್ಲ. ಈ ಸುದ್ದಿಯನ್ನು ಜನರಿಗೆ ಹೇಳಿ ನನ್ನ ಕುಂಕುಮವನ್ನು ನಾನೇ ಅಳಕಿಸಿಕೊಳ್ಳಲೇನು? ಛೇ! ಛೇ! ನಾನು

ಅಂಥ ಹುಚ್ಚಿಯಲ್ಲ. ನಿಮ್ಮ ಅಪರಾಧವೆಂದರೆ ನನ್ನ ಅಪರಾಧಕ್ಕಿಂತ ಹೆಚ್ಚು ಬಚ್ಚಿಡುತ್ತಿದ್ದೆನು. ಆದರೆ ಅದೆಲ್ಲವೂ ಈಗ ವಿಪರೀತವಾಯಿತು. ಅದಿರಲಿ, ನಾನು ಸಾಯಲೇ ಬೇಕೆಂದು ನಿಮ್ಮ ಇಚ್ಛೆಯಿದ್ದ ಪಕ್ಷಕ್ಕೆ ನಾನು ಸಂತೋಷದಿಂದ ನಿಮ್ಮನ್ನೇ ಧ್ಯಾನಿಸುತ್ತ ಪ್ರಾಣಬಿಡುವೆನು. ಸ್ವಲ್ಪ ಹೊತ್ತಿನಹಿಂದೆ ನಾನು ಎಷ್ಟು ಗಾಬರಿಯಾಗಿದ್ದೆನಲ್ಲ! ನನ್ನ ಮರಣವನ್ನು ನೀವೇ ಇಚ್ಛಿಸುವಿರೆಂದು ತಿಳಿದಕೂಡಲೇ ನನ್ನ ಅಂಜಿಕೆಯೆಲ್ಲ ಓಡಿಹೋಯಿತು. ಯಮದೂತರುಗಳಿರಾ? ನಿಮ್ಮ ಪಾಶಬಂಧನವನ್ನು ನಾನು ಸಹಜವಾಗಿ ತಡೆದೇನು. ಬನ್ನಿರಿ ನನ್ನನ್ನು ಒಯ್ಯಿರಿ ( ಪಡದೆ ಬೀಳುತ್ತದೆ. )

---

## ೨ ನೇ ಪ್ರವೇಶ.

ಸ್ಥಳ :-ಹಂಪಿಯೊಳಗಿನ ಒಬ್ಬ ಬ್ರಾಹ್ಮಣನ ಮನೆ.

(ರಾಮುಭಟ್ಟನು ಸಂಧ್ಯಾವಂದನೆಯನ್ನು ಮಾಡುತ್ತ ಕುಳಿತಿರುತ್ತಾನೆ.)

ಶಾಮಭಟ್ಟ—( ಒಳಗೆ ಬಂದು ) ಯಾಕೆ, ರಾಮುಭಟ್ಟರೇ ?

ರಾಮು—ಓಹೋ! ಶಾಮಭಟ್ಟರೇನು ? ನಮಸ್ಕಾರ, ಬನ್ನಿರಿ.

ಶಾಮಭಟ್ಟ—ಯಾಕೆ ? ಸಂಧ್ಯಾವಂದನೆಗೆ ತಡವಾಯಿತು ?

ರಾಮು—ನ್ನಿನ್ನಿನ ರಾತ್ರಿ ಯಾತ್ರಸ್ಥರೊಳಗೆ ಒಬ್ಬ ಹೆಣ್ಣುಮಗಳು ತೀರಿಕೊಂಡಳು. ಈ ಹೊತ್ತು ಅವಳ ನಿರ್ವಾಹಕ್ಕೆ ಹೋಗಿದ್ದೆನು. ಆದ್ದರಿಂದ ನಕ್ಷತ್ರದರ್ಶನವಾದ ಮೇಲೆ ಸ್ನಾನಮಾಡಿ ಸಂಧ್ಯಾವಂದನೆಗೆ ಇದೇ ಈಗ ಕುಳಿತೆನು.

ಶಾಮು—ಹೌದು. ಬ್ರಾಹ್ಮಣರಿಗೆ ಬ್ರಾಹ್ಮಣರೇಗತಿ. ಇಂಥ ಪ್ರಸಂಗದಲ್ಲಿ ಸಹಾಯಮಾಡಲೇಬೇಕಾಗುತ್ತದೆ.

ರಾಮು—ಅದಿರಲಿ. ನೀವು ಬ್ರಾಹ್ಮಣರೆಂದಿರಿ; ಆ ಹೆಣ್ಣು ಮಗಳು ಬ್ರಾಹ್ಮಣಜಾತಿಯವಳು ಹೌದೋ ಅಲ್ಲವೋ ನನಗೆ ಸಂಶಯಬಂದಿರುತ್ತದೆ.

ಶಾಮು—ಇದೇನು ? ನೀರು ಕುಡಿದು ಬಂದ ಭಾವಿ ಹೊಲಿಯರದೇನೋ ಎಂದ ಹಾಗೆ ಹೇಳುವಿರಿಯಲ್ಲ ? ಒಳ್ಳೇ ಧಾರ್ಮಿಕರು ! ಅವಳು

ಬ್ರಾಹ್ಮಣಳು ಹೌದೋ ಅಲ್ಲವೋ ಎಂಬದನ್ನು ವಿಚಾರಿಸದೆ, ಅವಳನ್ನು ಹೊತ್ತುಹಾಕಿ ಬಂದಿರೇನು? ವಾಹವ್ವಾ !

ಶಾಮು— ಇಲ್ಲ ಸುಮ್ಮನೇ ಮಾತು ಹೇಳುವೆನು. ನಿಜವಾಗಿ ನೋಡಿದರೆ, ಬ್ರಾಹ್ಮಣಳಾದರೂ ಅಷ್ಟೇ, ಮತ್ತೆಯಾರಾದರೂ ಅಷ್ಟೇ, ನಮಗೂ ನಿಮಗೂ ಆರಂಭದಿಂದ ಹದಿನಾಲ್ಕು ಸಮಾಪ್ತಿಯವರಿಗೆ ಯಥೇಚ್ಛ! ಅವಳ ಗಂಡನೆಂಬುವವನು ದೊಡ್ಡ ಶ್ರೀಮಂತನಿರುವನು.

ಶಾಮು—ಶಾಹಾಬ್ಬಾಶ್. ಹೊಸದಾಗಿ ಒಬ್ಬ ಶ್ರೀಮಂತ ಯಜಮಾನನನ್ನು ದೊರಕಿಸಿದಿರಿ. (ಶಾಮುಭಟ್ಟನು ನಗುತ್ತಾನೆ.) ಒಳ್ಳೇದು ಶಾಮುಭಟ್ಟರೇ ಅವಳು ಬ್ರಾಹ್ಮಣಳಲ್ಲವೆಂದು ನಿಮಗೆ ಹೇಗೆ ಸಂಶಯಬಂದಿತು?

ರಾಮು—ಇಲ್ಲಿ ನೋಡಿರಿ, ಹಣೆಯಮೇಲೆ ಹಚ್ಚೆಯು ಇದ್ದಿಲ್ಲ. ಕೊರಳೊಳಗೆ ಮಂಗಳಸೂತ್ರವೂ ಇದ್ದಿಲ್ಲ. ಅಂದಮೇಲೆ ಅವಳಿಗೆ ಬ್ರಾಹ್ಮಣಳೆನ್ನುವಿರೋ ಮುಸಲ್ಮಾನಳೆನ್ನುವಿರೋ?

ಶಾಮು—ಇಷ್ಟರಮೇಲಿಂದ, ಅವಳು ಬಾಹ್ಮಣಳಲ್ಲವೆಂದು ಅನ್ನಕೂಡದು. ಯಾಕಂದರೆ ಈಗ ಇಂಗ್ರೇಜೀ ರಾಜ್ಯದಲ್ಲಿ ಎಲ್ಲವೂ ಇಂಗ್ರೇಜಿಯಾಗಿ ಬಿಟ್ಟದೆ. ನೀವು ಪುನಾ ಬೊಂಬಾಯಿಕಡಿಗೆ ಹೋದರೆ, ನೋಡಬಹುದು. ಅಲ್ಲಿಯ ಬ್ರಾಹ್ಮಣ ಹೆಂಗಸರಿಗೆ, ಹಣೆಯಮೇಲೆ ಹಚ್ಚೆ ಇರುವದಿಲ್ಲ. ಕೊರಳೊಳಗೆ ಯಾವ ಆಭರಣಗಳೂ ಇರುವದಿಲ್ಲ. ಬಳೆಗಳು ಅಷ್ಟಕ್ಕಷ್ಟೇ.

ರಾಮು—ಅಯ್ಯಯ್ಯೋ ! ಹಾಗಾದರೆ ಅವರು ವಿಧವೆಯರಂತೆ ಕಾಣುತ್ತಿರಬಹುದಲ್ಲ?

ಶಾಮು—ಛೀ ! ಛೀ ! ಛೀ ! ಶಾಂತಂ ಪಾಪಂ. ಇನ್ನು ಅವರ ತಲೆಯ ಮೇಲೆ ಕೂದಲುಗಳು ಮಾತ್ರ ಇರುವವು. ಪಾಪ ಅವರಗಂಡಂದಿರಿಗೆ ಆಯುಷ್ಯವಾಗಲಿ. (ಧ್ಯಾನಿಸಿ) ಅದಿರಲಿ, 'ವಿಪ್ರವಾಕ್ಯೋ ಜನಾರ್ದನಃ' ನಿಮ್ಮ ಮಾತು ಕೊಂಚು ನಿಜವಾಗಿದೆ. ಕೆಲವರಿಗೆ, ಫ್ಯಾಷನ್ ಎಂದು ಕತ್ತಿ, ಕತ್ತರಿ ಚಿಮುಟಿಗೆಗಳ ಮುಹೂರ್ತವಾಗಿರುತ್ತದೆ.

ರಾಮು — ಸೈ. ಸೈ. ಕಲಿಕಾಲಸಮಾಚಾರ ಹಾಗಾದರೆ ಆ ಸತ್ತ ಹೆಣ್ಣುಮಗಳು, ಇಂಥವಳೇ ಒಬ್ಬಳು, ಇದ್ದರೂ ಇರಬಹುದು.

ರಾಮು—ಒಳ್ಳೇದು ಶಾಮುಭಟ್ಟರೇ ಆ ಬಡಪ್ರಾಣಿಯು ಏನಾಗಿ ಸತ್ತಳು.

ರಾಮು—ಏನಾಗಿ ಸತ್ತಳು ? ಜೀವಹೋಗಿ ಸತ್ತಳು.

ಶಾಮು—ಅಹಾ ! ಎಂಥ ಭಯಂಕರ ರೋಗವದು? ಜೀವವೇ ಹೋಯಿತೇ? ಜೀವಹೋಗಲಿಕ್ಕೆ ಕಾರಣವೇನಾಯಿತಂತೆ ?

ರಾಮು—ಜೀವಹೋಗಲಿಕ್ಕೆ ಕಾರಣವೇನು? ಸತ್ತುಹೋದಳೆಂದು ಜೀವಹೋಯಿತಂತೆ.

ಶಾಮು—( ತನ್ನಷ್ಟಕ್ಕೆ ) ವಾಹವ್ವಾ, ಕೋರ್ಟಿನಲ್ಲಿ ಇಂಥ ಬುದ್ಧಿವಂತರನ್ನು ಸಾಕ್ಷೀ ಹೇಳಲಿಕ್ಕೆ ನಿಲ್ಲಿಸಬೇಕು. ಅಂದರೆ ಬಲುಮಂದಿ ನ್ಯಾಯಾಧೀಶರಿಗೆ, ಚಳ್ಳಹಣ್ಣು ತಿನಿಸುವರು. ಇರಲಿ. ( ಪ್ರಕಾಶವಾಗಿ ) ರಾಮುಭಟ್ಟರೆ ಮುದುಕರಾಗಿರುವಿರಿ. ಇನ್ನೂ ನಿಮ್ಮ ಕುಚೇಷ್ಟೆಗಳನ್ನು ಬಿಟ್ಟಿಲ್ಲವಲ್ಲ ?

ಶಾಮು—ಛೆ! ( ಹಾಗಲ್ಲಪ್ಪಾ ನಾನು ನಿಜವಾಗಿ ಹೇಳುವೆನು ಚೇಷ್ಟೆಯಲ್ಲ. ಜೀವಹೋದ ಕಾರಣದಿಂದಲೇ ಅವಳು ಸತ್ತಿರಬಹುದು.

ಶಾಮು— ಅದು ಹೇಗೆ ?

ರಾಮು—ಯಾಕಂದರೆ, ಬೇನೆಯ ಲಕ್ಷಣಗಳು ನನಗೇನೂ ತೋರುಲಿಲ್ಲ- ಅವಳ ಗಂಡನೆಂಬುವವನನ್ನು – ಅವನ ಹೆಸರೇನೋ ವಸಂತರಾಯನಂತೆ – ಅವನನ್ನು ಕೇಳಿದರೆ, ವಿಷಮುಜ್ವರದಿಂದ ಸತ್ತಳೆಂದು ಹೇಳಿದನು. ಹೆಣವಂತೂ ನಿದ್ರೆಹತ್ತಿ ಮಲಗಿದಹಾಗೆ ತೋರುತ್ತಿತ್ತು. ಮೋರೆಯ ಮೇಲಂತೂ ಎನೂ ಕೆಟ್ಟ ಚಿನ್ಹಗಳಿದ್ದಿಲ್ಲ. ಎದೆಗೇನೋ ಗಾಯದಂತೆ ಕಾಣಿಸಿತು.

ಶಾಮು--ಆಹಾ! ಅದರಿಂದಲೇ ಸತ್ತಿರಬಹುದು. ಅದಕ್ಕೇನೋ ಅನ್ನುತ್ತಾರಲ್ಲ? ತು, ತು, ತು, ಏನು? ನೆನಪಾಗಲೊಲ್ಲದು.

ರಾಮು--ತುಬಾಕಿಯೇನು?

ಶಾಮು--ಹಾ! ತುಬಾಕಿಯ ಹೊಡತದಿಂದ ಸತ್ತಿರಬಹುದು ಪಾಪ. ಬಡಪ್ರಾಣಿಯನ್ನು ಯಾರು ಕೊಂದರೋ ಏನೋ? ಒಳ್ಳೇದು ನಮಗೇಕೆ ಉಸಾಬರಿ. ಒಳ್ಳೇದು ಬರುತ್ತೇನೆ.

( ಹೊರಡುತ್ತಾನೆ )

ರಾಮು--ಶಾಮುಭಟ್ಟರೇ ಇಲ್ಲಿ ಇನ್ನೊಂದು ಸ್ವಲ್ಪ ಬನ್ನಿರಿ.

ಶಾಮು--ಯಾಕೆ ?

ರಾಮು--ಇದನ್ನು ಮತ್ತೆಯಾರಿಗೂ ಹೇಳಬೇಡಿರಿ.

ಶಾಮು--ಯಾಕಾಗಲ್ಲೊಲ್ಲದು. ( ತನ್ನಷ್ಟಕ್ಕೆ ) ನಾನಂತೂ ಪ್ರಯತ್ನ ಮಾಡುತ್ತೇನೆ. ಎಲುವಿಲ್ಲದ ನಾಲಿಗೆ ಏನಾಗುತ್ತದೋ ಏನೋ? ಕಿವಿ

ಮಾತು ಹೇಳುವವರು ಹೀಗೇ ಹೇಳುವದುಂಟು. ಹಾ! ಹಾ! ಅಂಬುವದ ರೊಳಗೆ ಸುದ್ಧಿಯು ಹಬ್ಬುವದುಂಟು. ರಾಮಭಟ್ಟನಾದರೂ ಹೀಗೆ ಎಷ್ಟು ಜನಂಗೆ ಹೇಳಿರುವನೋ?

( ಹೋಗುತ್ತಾನೆ )

ರಾಮ—( ತನ್ನಷ್ಟಕ್ಕೆ ) ಈ ಹೊತ್ತು ಸಂಧ್ಯಾವಂದನವೇ ಆಗಲಿಲ್ಲ. ಹೀಗೆ ಎಷ್ಟೋ ಸಾರೆ ಆಗುವದು ನಡೆದಿರುತ್ತದೆ.

---

## ೩ನೇ ಪ್ರವೇಶ.

( ಸ್ಥಳ ಹಾಳುಗುಹೆ. ಗಜರೆಯು ಕುಳಿತಿರುತ್ತಾಳೆ. )

ಗಜರಾ—(ತನ್ನಷ್ಟಕ್ಕೆ) ಮನುಷ್ಯಜಾತಿಯು ಎಷ್ಟು ಕ್ಷುದ್ರವು. ನಾನು ಎಷ್ಟು ಗಟ್ಟಿ ಮನಸ್ಸು ಮಾಡಿದರೂ ಕಡೆಗೆ ನನಗೆ ಸಾಯುವ ಹಾಗಾಗ ವಲ್ಲದಲ್ಲ? ದೇವರೇ ನನ್ನನ್ನು ಕಾಪಾಡು. ಇದೊಂದುಸಾರೆ ಮರಣದ ಕೈಯೊಳಗಿಂದ ಪಾರುಮಾಡು.

( ಬಾ ಬಿಡಿಸೋ ಮೋಹನ್ನಾ ಎಂಬಂತೆ )

ಬಾ ಬಿಡಿಸೋ ಬಂಧನವ। ಮಧುಕೈಟಭಾರೆ ಮುರಾರೆ ॥ ಪ ॥ ಪ್ರೇಮಸಾಗರ ನಿನ್ನ। ನಾಮವ ನೆನೆಯಲು ; ಉಮ್ಮಳಿಉಡಗುವದು । ದೂರದಿ ಬಾ ಬಿಡಿಸೋ ... ॥ ೧ ॥

ಮಹಿಮೆಯೆ ಪೇಳೆನೆ । ಸಹಜವಲ್ಲವೊ ದೇವಾ । ಸಹಿಸಲಾರೆನು ಕೃಪೆ ಮಾಡಿ ನೀ । ಬಾ ... ॥ ೨ ॥

ನಾಗೇಂದ್ರನನುತಿ । ಸಾಗಿಬಂದಾಲಿಸಿ । ನಾಗಶಯನನೀ ಕಾಪಾಡಿದಿ । ಬಾ ... ॥ ೩ ॥

ಪಾಂಚಾಲಿಯವಮಾನ । ವಾಂಛಿಸೆ ಮಾಯೆಯಿಂ । ವಂಚಿಸಿದಿಯೋ ಖಳದುಶ್ಶಾಸನನ । ಬಾ ... ॥ ೪ ॥

ಭಕ್ತವತ್ಸಲಾ ನಿನ್ನ। ಭಕ್ತಿಯಿಂ ಬೇಡುವೆ। ಮುಕ್ತಮಾಡೆನ್ನ ಗುಹೆಯಿಂದ ನೀ। ಬಾ ... ॥ ೫ ॥

ಅನಾಥನಾಥಾ ನೀನು ಯಾವರೂಪದಿಂದಾದರೂ ಬಂದು ನನ್ನನು ಪಾರಮಾಡಬಾರದೇ? ನನ್ನ ಪ್ರಾರ್ಥನೆಯು ನಿನ್ನ ಚರಣಸನ್ನಿಧಿಗೆ ತಲುಪಿತಷ್ಟೇ? ( ತುಸುಹೊತ್ತು ಸುಮ್ಮನೆ ಕುಳಿತು . ) ಅಯ್ಯಯ್ಯೋ! ಈ ವೇದನೆಗಳನ್ನು ತಾಳಲಾರೆನು! ದೇವರೇ! ಮರಣವನ್ನಾದರೂ ಬೇಗನೇ ತರಬಾರದೇ? ( ನೆನಪುಮಾಡಿ ) ನಾನು ಇಷ್ಟು ಹೊತ್ತಿನವರೆಗೆ ಮರೆತು ಕುಳಿತಿರುವೆನಲ್ಲ; ಏನೂ ಕಳವಳಿಸದೆ ಪ್ರಾಣಹೋಗಲೆಂದು ವಿಷವನ್ನು ಇಟ್ಟರು

ವೆನೆಂದು ಪತ್ರದಲ್ಲಿ ಬರೆದಿರುವರು. ಅದು ಎಲ್ಲಿರುವದು? ( ಹುಡುಕಿ ಕೈಯ್ಯ ಲ್ಲಿ ಹಿಡಿದು ) ಇಕೋ ಇಲ್ಲಿಯೇ ಇರುವದು. ಪ್ರಾಣನಾಥರೇ ( ಧ್ಯಾನಿಸಿ ) ಈ ಗುಹೆಯಲ್ಲಿ ನನ್ನನ್ನು ತಂದು ಚಲ್ಲಿದವರೂ, ಕುಡಿಯಲಿಕ್ಕೆಂದು ವಿಷ ವನ್ನು ಇಟ್ಟವರೂ ಯಾರು? ನೀವೇ ಅಲ್ಲವೇ? ( ವಿಚಾರಿಸಿ ) ಎಂಥ ಸೋಜಿಗವಿದು! ಇಂಥ ಕಟುಕತನವನ್ನು ಮರೆತು ನಿಮ್ಮನ್ನೇ ನೆನಿಸುತ್ತೇನೆ. ಇಷ್ಟೇ ಏಕೆ, ಜನ್ಮ ಜನ್ಮಾಂತರಕ್ಕೂ ನೀವೇ ನನಗೆ ಪತಿಯಾಗಿರಿ. ಇಷ್ಟೊಂ ದೇ ಭಗವಂತನನ್ನು ನಾನು ಬೇಡಿಕೊಳ್ಳುವೆನು. ( ವಿಚಾರಿಸಿ ) ನನ್ನ ದೈವ ಕ್ಕೆ ನೀವೇನು ಮಾಡುವಿರಿ? ನನ್ನ ಮನಸ್ಸಂತೂ ನಿಮ್ಮನ್ನೇ ಸೋಡುತ್ತದೆ. ಅಪರಾಧಗಳನ್ನು ನೋಡುವದೇ ಇಲ್ಲ. ಹಾ! ಪ್ರಾಣನಾಥಾ! ( ಎಂದು ಚೀರಿ ವಿಷವನ್ನು ಕುಡಿಯುತಾಳೆ. )

( ತೆರೆಯಲ್ಲಿ )

ಸಂಜೀವರಾಯರೇ ವಸಂತರಾಯರು ಇತ್ತ ಕಡೆಗೆ ಹೋದರು. ಹೀರಾ, ಸುಮ್ಮನಿರು ಎನೋ ಒಂದು ದ್ವನಿಯು ಕೇಳಬಂದಹಾಗಾಯಿತು. ಇಕೋ ಇತ್ತ ಕಡೆಯಿಂದಲೇ ಬಂದಿತು. ಹೀರಾ ಇಲ್ಲಿನೋಡು. ಈ ಕಲ್ಲುಗಳು ಹೊಸ ದಾಗಿ ಒಟ್ಟಿದಂತೆ ಕಾಣುವದಿಲ್ಲವೇ? ನಿಲ್ಲು ಇವುಗಳನ್ನೆಲ್ಲಾ ತೆಗೆಯುವೆನು. ಒಳಗೆ ಏನಿರುವದೋ ನೋಡೋಣ.

( ಸಂಜೀವನೂ ಹೀರೆಯೂ ಒಳಗೆ ಬರುತ್ತಾರೆ. )

ಸಂಜೀವ—ಆಹಾ! ಹೀರಾ! ಗಜರೆಯು ಇಲ್ಲಿಯೇ ಇರುವಳು! ಗಜರಾ! ಗಜರಾ!

ಗಜರಾ—ಯಾರವರು?

ಸಂಜೀವ—ಯಾಕೆ ನನ್ನ ಗುರ್ತು ಹತ್ತವಲ್ಲದೇನು? ನಾನು ಸಂ ಜೀವನು.

ಗಜರಾ—ಸಂಜೀವಾ? ನಮ್ಮ ಸಂಜೀವಾ? ದಿಟ್ಟಿಸಿನೋಡಿ ಹಾ! ಸಂ ಜೀವಾ? ನೀನು ಇಲ್ಲಿ ಹೇಗೆ ಬಂದೆ?

ಸಂಜೀವ—ಮೊದಲು ಎದ್ದು ಕುಳಿತುಕೋ. ಆ ಮೇಲೆ ಹೇಳಿ ವೆನು.

ಗಜರಾ—ನನಗೆ ಏಳಲಿಕ್ಕೆ ತ್ರಾಣವಿಲ್ಲ. ( ಸಂಜೀವನು ಎಬ್ಬಿಸಿ ಕೂಡ್ರಿಸುತ್ತಾನೆ. )

ಹೀರಾ—ಸಂಜೀವರಾಯರೇ ಅವರಿಗೆ ಅನ್ನನೀರುಗಳಿಲ್ಲ. ಅಂದ ಮೇಲೆ ತ್ರಾಣವು ಹೇಗೆ ಉಳಿಯಬೇಕು?

ಗಜರಾ—ಇನ್ನು ನನ್ನ ಜೀವವು ಉಳಿಯಬಹುದು. ಸಂಜೀವಾ; ನೀನೆ ನನಗೆ ದೇವರಾಗಿ ಬಂದು ಪಾರುಮಾಡಿದಿ. (ಅವನ ಕಾಲುಹಿಡಿದು)

ನಿನ್ನ ಉಪಕಾರವನ್ನು ಹೇಗೆ ತೀರಿಸೇನು? ಸಂಜೀವಾ ನಿನಗೆ ನಾನು ಇರುವೆನೆಂದು ಯಾರು ಹೇಳಿದರು.

ಸಂಜೀವ—ಹೀರೆಯು ಹೇಳಿದಳು.

ಗಜರಾ—ಹೀರೆಯು ಇಲ್ಲಿ ಬಂದಿರುವಳೇನು?

ಹೀರಾ—ಹೌದು ಅಮ್ಮನವರೇ ನಾನು ಇಲ್ಲಿಯೇ ಇರುವೆನು.

ಗಜರಾ—ಹೀರಾ ಬೇಗಬಾ. ನನ್ನನ್ನು ಅಪ್ಪಿಕೋ. ನೀವಿಬ್ಬರು ಬಂದು ನನ್ನ ಕೊರಳೊಳಗೆ ಹಾಕಿದ ಈ ಯಮಪಾಶವನ್ನು ತಗೆದೊಗೆದಂತಾಯಿತು. ಸಂಜೀವಾ ನಾನು ಇನ್ನು ಬದುಕುಬಹುದಲ್ಲವೇ ?

ಸಂಜೀವ—ಇನ್ನೇನು ಸಂಶಯವಿರುವದು?

ಗಜರಾ—ವಿಷವನ್ನು ಕುಡಿದಿರುವೆನು.

ಸಂಜೀವ—ಅಯ್ಯೋ! ಇದನ್ನೇನು ಮಾಡಿಟ್ಟುಕೊಂಡಿ.

ಗಜರಾ—ಕುಡಿದು ಬಹಳ ಹೊತ್ತೇನೂ ಆಗಿಲ್ಲ.

ಹೀರಾ—ಏನಾದರೂ ಔಷಧಕೊಟ್ಟು ಅದರ ಕಸುವು ಮುರಿಯಬಾರದೇ ?

ಸಂಜೀವ—ಮೊದಲು ಅದು ನಿನಗೆ ಎಲ್ಲಿಸಿಕ್ಕಿತು?

ಗಜರಾ—ಇಗೋ ಈ ಬಟ್ಟಲದಲ್ಲಿತ್ತು.

ಸಂಜೀವ—ಬಟ್ಟಲವನ್ನು ನೋಡಿ ಹಾ! ಅಂಜಬೇಡ, ವಿಷವೆಲ್ಲವೂ ತಳಕ್ಕೆ ಕೂತಿರುವದು. ಮೇಲಿನ ನೀರನ್ನಷ್ಟೆ ಕುಡಿದಿರುವಿ.

ಗಜರಾ—ದೇವರು ದಯಪಾಲಿಸಿದನು. ಇಲ್ಲದಿದ್ದರೆ ನೀವು ಇಲ್ಲಿಗೆ ಬಂದೂ ಬಾರವ ಹಾಗೆ ಆಗುತ್ತಿತ್ತು.

ಸಂಜೀವ—ಗಜರಾ, ಇದನ್ನು ಇಲ್ಲಿ ಯಾರು ತಂದಿದ್ದರು ?

(ಗಜರೆಯು ದುಃಖಿಸುತ್ತ ಪತ್ರವನ್ನು ಒಗೆಯುತ್ತಾಳೆ.)

ಸಂಜೀವ—( ಪತ್ರವನ್ನು ತನ್ನಷ್ಟಕ್ಕೆ ಓದಿಕೊಂಡು ) ಹೀರಾ, ಹೌದು ನೋಡು, ನೀನು ಹೇಳಿದ್ದು ಎಲ್ಲವೂ ನಿಜ.

ಹೀರಾ—ಕೇಳಿದಮೇಲಂತೂ ಬಿಡಿರಿ, ಪ್ರತ್ಯಕ್ಷವಾಗಿನೋಡಿ, ವಸಂತರಾಯರು ಇಂಥ ಕ್ರೂರರಿದ್ದಾರೆಂದು ನನಗೆ ನಂಬಿಗೆಯಾಗಲಿಲ್ಲ.

ಗಜರಾ—( ದುಃಖಿಸುತ್ತ ) ಮತ್ತೆಯಾಕೆ ನೆನಪುಮಾಡಿ ನನ್ನ ಹೊಟ್ಟೆಯಲ್ಲಿ ಉರಿಯನ್ನೆಬ್ಬಿಸುವಿಯೇ?

ಸಂಜೀವ—ಗಜರಾ ಈ ಪತ್ರವನ್ನು ಹೇಗೆ ಓದಿಕೊಂಡಿ.

ಗಜರಾ—ಈ ದೀಪದ ಬೆಳಕಿಗೆ.

ಸಂಜೀವ—ಅದು ಇಷ್ಟು ಹೊತ್ತು ಉರಿಯುತ್ತಿತ್ತೇನು?

ಗಜರಾ— ಇಲ್ಲ ಸ್ವಲ್ಪಹೊತ್ತಿನಲ್ಲಿಯೇ ಅದರೊಳಗಿನ ಎಂಣೆ ತೀರಿತು.

ಹೀರಾ—ಅಯ್ಯೋ! ಕತ್ತಲೆಯೊಳಗೆ ಎರಡು ದಿವಸ ಒಂದೇಸವನೆ ಹೇಗೆ ಕುಳಿತಿದ್ದೀರಿ!

ಗಜರಾ—ಹೇಗೆ ಕುಳಿತೆನೋ, ಇಷ್ಟು ಹೊತ್ತು ಅನ್ನನೀರುಗಳಿಲ್ಲದೆ ಜೀವದಿಂದಾದರೂ ಹೇಗೆ ಇರುವೆನೋ, ಮೊದಲು ಈ ಗುಹೆಯನ್ನು ನೋಡಿ ಹೇಗೆ ಅಂಜಿ ಸಾಯಲಿಲ್ಲವೋ, ದೇವರೆ ಬಲ್ಲ. ಇನ್ನಾದರೂ ಬೇಗ ಹೊರಗೆ ಹೋಗೋಣ ನಡೆಯಿರಿ.

ಸಂಜೀವ—ಹೌದು, ಗಜರಾ ಮೊದಲು ಹೊರಗೆ ಹೋಗೋಣ; ಆ ಮೇಲೆ ಮಾತಾಡೋಣ.

ಗಜರಾ--ಸಂಜೀವಾ ನನಗೆ ಏಳಲಿಕ್ಕೆ ಬರುವದಿಲ್ಲ.

( ಸಂಜೀವನೂ ಹೀರೆಯೂ ಕೈಹಿಡಿದು ಗಜರೆಯನ್ನು ಹೊರಗೆ ಕರೆದುಕೊಂಡು ಬರುತ್ತಾರೆ. )

ಗಜರಾ--ಸಂಜೀವಾ ಇನ್ನೇನು ಗತಿ.

ಸಂಜೀವ--ತುಸುಹೊತ್ತು ಈ ಹಾಸುಗಲ್ಲಿನಮೇಲೆ ಕುಳಿತು ವಿಚಾರಮಾಡೋಣ. ( ಎಲ್ಲರೂ ಕುಳಿತುಕೊಳ್ಳುತ್ತಾರೆ. ) ಗಜರಾ ನೀನು ಎಲ್ಲಿಗೆ ಹೋಗಬೇಕೆನ್ನುವಿಯೋ ಅಲ್ಲಿಗೆ ಕಳುಹುವೆನು.

ಗಜರಾ--ಎಲ್ಲಿಗೆ ಹೋಗಲೆನ್ನಲಿ? ನಮ್ಮ ಊರಿಗಂತೂ ಹೋಗುವ ಹಾಗಿಲ್ಲ. ಅಲ್ಲಿ ಎಲ್ಲ ಜನರು ನಾನು ಸತ್ತಿರುವೆನೆಂದು ತಿಳಿದಿರುವರು. ಆದ್ದರಿಂದ ಪುನಃ ಎಂದೂ ನಾನು ಕಾಲಿಡಲಿಕ್ಕಿಲ್ಲ.

ಸಂಜೀವ--ಹಾಗಾದರೆ ಎಲ್ಲಿಗೆ ಹೋಗುವಿ?

ಗಜರಾ--ಮತ್ತೆಲ್ಲಿಗೆ ಹೋಗಲಿ? ಸಂಜೀವಾ ( ಅಳುತ್ತ ) ನಾನು ಅನಾಥಳು; ನನಗೆ ನೀನೊಬ್ಬ ಅಣ್ಣನೆಂದು ತಿಳಿದಿದ್ದೇನೆ. ನೀನು ಎಲ್ಲಿಗೆ ಕರೆದುಕೊಂಡು ಹೋಗುವಿಯೋ ಅಲ್ಲಿಗೆ ಬರುವೆನು.

ಸಂಜೀವ--( ವಿಚಾರಿಸಿ ) ಹಾಗಾದರೆ ಹೀಗೆ ಮಾಡೋಣ.

ಗಜರಾ--ಏನು ಮಾಡೋಣ?

ಸಂಜೀವ--ಹೊಸದಾಗಿ ಈಗ ನನಗೆ ಅಲ್ಹಾಬಾದದಲ್ಲಿ ಒಂದು ಕೆಲಸವು ಹತ್ತಿರುವದು. ಸ್ವಲ್ಪ ದಿವಸಗಳಲ್ಲಿ ನಾನು ಅಲ್ಲಿಗೆ ಹೋಗುವವನೇ ಇದ್ದೆನು. ನೀನು ನನ್ನಕೂಡ ಬರಲಿಚ್ಛಿಸಿದರೆ, ಈಗಿಂದೀಗಲೇ ಅಲ್ಲಿಗೆ ಹೊರಡುವೆನು.

ಗಜರಾ--ಯಾಕಾಗವೊಲ್ಲದು. ಆದರೆ ನಿಮ್ಮ ತಾಯಿಗೂ ತಂಗಿಗೂ ಏನೂ ಹೇಳದೆ ಹಾಗೇ ಬರುವಿಯಾ?

ಸಂಜೀವ--ಅವರಿಗೆ ಪ್ರಯಾಗದಲ್ಲಿ ನನಗೆ ಕೆಲಸ ಹತ್ತಿದ್ದು ಗೊತ್ತಿರುವದು. ಬೇಗನೇ ಹಾಜರಾಗಬೇಕೆಂದು ತಾರು ಬಂದದರಿಂದ, ನಾನು ಒಮ್ಮೆಲೆ ಹೊರಡಬೇಕಾಯಿತೆಂದು, ಹೀರೆಯು ಕಡೆಯಿಂದ ಹೇಳಿಕಳುಹುವೆನು. ಹೀರಾ ನಮ್ಮ ಮನೆಗೆಹೋಗಿ, ನಮ್ಮ ಅಪ್ಪನಿಗೆ ಹೀಗೆ ಹೇಳುವಿಯಾ?

ಹೀರಾ--ಒಳ್ಳೇದು ಹೇಳುವೆನು.

ಗಜರಾ—ಹಾಗಾದರೆ, ಹೀರೆಯು ನಮ್ಮ ಕೂಡ ಬರುವದಿಲ್ಲೇನು?

ಸಂಜೀವ—ಅಷ್ಟು ದೂರ ಅವಳು ಸುಮ್ಮನೆ ಯಾಕೆ ಬರಬೇಕು? ಊರಲ್ಲಿಯೇ ಇರಲಿ.

ಗಜರಾ – ಒಳ್ಳೇದು, ಹೀರಾ ಹಾಗಾದರೆ ನನ್ನನ್ನು ಮರೆಯಬೇಡ.

ಹೀರಾ--ಅಮ್ಮನವರೇ, ನಿಮ್ಮನ್ನು ನಾನು ಹೇಗೆ ಮರೆಯಬೇಕು? ನೀವೇ ಮಾತ್ರ ದೂರ ಹೋಗುವರಿ. ( ಅಳುತ್ತಾಳೆ. )

ಗಜರಾ--ಇರಲಿ. ಅಳಬೇಡ (ಅಪ್ಪಿಕೊಂಡು) ನಮ್ಮಿಬ್ಬರದೂ ಸುದೈವವಿದ್ದರೆ, ಇನ್ನೊಮ್ಮೆ ಎಂದಾದರೂ ಕೂಡಿರುವ ಪ್ರಸಂಗವು ಬಂದೀತಂತೆ. ಸುಮ್ಮನಾಗು. ಹೀರಾ, ನಿನಗೆ ಇನ್ನೊಂದು ಮಾತು ಹೇಳಬೇಕಾಗಿದೆ.

ಹೀರಾ--ಏನು? ಹೇಳಿರಿ.

ಗಜರಾ--ನಿನಗೆ ನನ್ನಾಣೆಯಾಗಿರುವದು, ನಾನು ಜೀವದಿಂದಿರುವವರೆಗೆ, ಪ್ರಾಣನಾಥರು ಮಲಕೆಯನ್ನು ಕೊಂದದ್ದನ್ನೂ ಆ ಮೇಲೆ ಈ ಗುಹೆಯಲ್ಲಿ ನನ್ನನ್ನು ತಂದು ಬಿಟ್ಟದ್ದನ್ನೂ ಮುಂದೆ ನೀವಿಬ್ಬರೂ ಬಂದು ನನ್ನ ಜೀವ ಉಳಿಸಿಕೊಂಡದ್ದನ್ನೂ. ಮತ್ತು ಈಗ ನಾನು ಸಂಜೀವನಕೂಡ ಪ್ರಯಾಗಕ್ಕೆ ಹೋಗುವದನ್ನೂ ಯಾರಿಗೂ ಹೇಳಬೇಡ. ಈ ಸಂಗತಿಗಳೆಲ್ಲ ನನ್ನ ಜೀವವಿರುವ ವರೆಗೆ, ನಮ್ಮ ಮೂವರ ಬಾಯಿಯಲ್ಲಿಯೇ ಇರಲಿ.

ಹೀರಾ--ಯಾಕಾಗವೊಲ್ಲದು. ಇದನ್ನು ನೀವು ಹೇಳಲಿಕ್ಕೆ ಬೇಕೇನು?

ಗಜರಾ--ಸಂಜೀವಾ, ನೀನಾದರೂ ಈ ಸಂಗತಿಗಳನ್ನು ಯಾರಿಗೂ ಹೇಳುವದಿಲ್ಲೆಂದು ವಚನಕೊಡು.

ಸಂಜೀವ--ಗಜರಾ, ಈ ವಿಜಯ ವಿಠ್ಠಲನ ಆಣೆಯೆಂದರೂ ಈ ಸಂಗತಿಗಳನ್ನು ನಾನು ಯಾರಿಗೂ ತಿಳಿಸುವದಿಲ್ಲ.

ಹೀರಾ--ಅಮ್ಮನವರೇ ತಡವಾಯಿತು. ಬೇಗಹೋಗೋಣನಡೆಯಿರಿ. [ ಗಜರೆಯು ತುಸುಹೊತ್ತು ಸುಮ್ಮನೆ ನಿಂತು ಕಣ್ಣೀರುಗಳನ್ನೊರಿಸಹತ್ತಿವಳು. ]

ಸಂಜೀವ--ಯಾಕೆ, ಗಜರಾ? ಮತ್ತೆ ಯಾಕೆ ಅಳುವಿ?

ಗಜರಾ--ಇಲ್ಲಿ ಅವ್ವನನ್ನೂ, ಬಂಧು ಬಳಗದವರನ್ನೂ ಬಿಟ್ಟು ದೂರದೇಶಕ್ಕೆ ಹೋಗಿ ನಿನ್ನ ಹೊರ್ತು ನನಗೆ ಮತ್ತೊಬ್ಬರ ಗುರ್ತು ಸಹ ಇಲ್ಲದ ಸ್ಥಳದಲ್ಲಿ ನಾನು ಹೇಗಿರಲಿ?

ಸಂಜೀವ--ಗಜರಾ, ಇನ್ನೊಮ್ಮೆ ನೀನು ಇಲ್ಲಿಗೆ ಎಂದೂ ಬರುವದಿಲ್ಲವೇ?

ಗಜರಾ--ಇಲ್ಲ. ನನಗೆ ತಿರುಗಿಬರುವ ಆಶೆಯಿಲ್ಲ. ಇವರೆಲ್ಲರ ಪಾಲಿಗೂ ಒಮ್ಮೆ ನಾನು ಬದುಕಿರುವೆನೆಂದು ಪುನಃ ಇವರಿಗೆ ತಿಳಿಯಬೇಕೆಂದು ಕೂಡ ಆಶೆಯಿಲ್ಲ.

ಸಂಜೀವ--[ ತನ್ನಷ್ಟಕ್ಕೆ ] ಆ, ಆಶೆಯು ನನಗೆ ಮಾತ್ರ ಇರುವದು. ಪ್ರಯಾಗದಲ್ಲಂತೂ ಕೆಲವು ಕಾಲಹೋಗಲಿ; ಆಮೇಲೆ ಏನಾದರೂ ಹಂಚಿಕೆಯಿಂದ ಇವಳಗಂಡನಿಗೂ ಇವಳಿಗೂ ಭೆಟ್ಟಿಮಾಡಿಸಿ, ಇವಳನ್ನು ಅವನ ಕೂಡ ಕಳುಹಿಬಿಡುವೆನು. ಮುಂದೆ, ಎಲ್ಲಿಯೇ ಇರವೊಲ್ಲರೇಕೆ. [ ಪ್ರಕಾಶವಾಗಿ ] ಗಜರಾ, ನಿನ್ನ ಇಚ್ಛೆಯು ಏನೇ ಇರಲಿ, ಈಗ ಪ್ರಯಾಗಕ್ಕೆ ಬರಲಿಕ್ಕೆ ದುಃಖವೆನಿಸಿದರೆ, ಮತ್ತೆಲ್ಲಿ ಹೋಗುವಿ?

ಗಜರಾ--ಮತ್ತೆಲ್ಲಿ ಹೋಗಲಿ? ಪ್ರಯಾಗಕ್ಕೆ ಬರಲಿಕ್ಕೆಬೇಕು; ಆದರೆ ನನ್ನ ಹುಟ್ಟಿದ ಊರನ್ನು ಬಿಟ್ಟು ದೂರ ಹೋಗಲಿಕ್ಕೆ ನನಗೆ ಬಹಳ ವ್ಯಸನವಾಗುತ್ತದೆ.

ಸಂಜೀವ--ಉಪಾಯವಿಲ್ಲ. ಹೇಗಾದರೂ ಮಾಡಿ ನಿನ್ನ ದುಃಖವನ್ನು ನುಂಗಿಕೋ.

( ' ಧನರಾಶೀ ಜಾತಾ ' ಎಂಬಂತೆ. )

ಪರವೂರಿಗೆ ತೆರಳಲ್ಕೆ ದುಃಖಯಾಕೆ ।
ಬಿಡು ಚಿಂತೆಯ ಬಿಡು ಚಿಂತೆಯ ‖ ಪಲ್ಲ ‖

ಬಾಲತನದೊಳಾಡಿದ ತೊಟ್ಟಿಲವನು ।
ಕಾಲು ಬರಲು ದುಃಖಿಸದೆ ಧಿಕ್ಕರಿಸಿದಿ ।
ತಾಳದರಂತೆ ವಿಯೋಗವನು. ‖ ೧ ‖

( ಎಲ್ಲರೂ ಹೋಗುತ್ತಾರೆ. )

## ೪ನೇ ಅಂಕು.

### ೧ ನೇ ಪ್ರವೇಶ.

ಸ್ಥಳಃ—ಪ್ರಯಾಗದೊಳಗಿನ ಒಂದು ಮನೆ.

( ಗಜರೆಯು ಮಲಗಿರುತ್ತಾಳೆ. ಸಂಜೀವನು ಹತ್ತರ ಕುಳಿತಿರುತ್ತಾನೆ )

ಸಂಜೀವ—ರಾಗ-ಯಮುನಕಲ್ಯಾಣ. 'ಟಕಮಕ ಪಾಹಿ' ಎಂಬಂತೆ.

ಈ। ತನುಮನೋ ಬಾಧೆಯು ತಂಗಿ ನೀ ಪೇಳೇ ತಾಳುವದೆಂತದು।
ಅನುದಿನ ಬಲಗುಂದಿಪ ಸಂತಾಪದ ರೋಗವೆಂತಿದು ಪೇಳೆ ॥ಪಲ್ಲ॥

ಬಿಳುಪೇರಿತು ಬಾಡಿತು ಮೊಗದಾವರೆ।
ಜಳತಗಲಿದಯೆಳೆ ಸುಳಿವಾಳಿಯವೋಲ್।

ಬಳಲಿಕೆಯ ಕಾರಣೇನೇ। ತನುಮನೋ ಬಾಧೆಯು ॥ ೧ ॥

ಗಜರಾ—ಅಣ್ಣಾ, ಸಂಜೀವಾ, ನನ್ನದು ನನಗೇನು ತಿಳಿಯಬೇಕು? ಹೊಟ್ಟೆಯಲ್ಲಿ ಮಾತ್ರ ಸಮಾಧಾನವಿಲ್ಲ.

ಸಂಜೀವ—ಮೃತ್ಯುವಿನ ಬಾಯಿಯೊಳಗಿಂದ ಒಮ್ಮೆ ಉಳಿಸಿಕೊಂಡು ಬಂದಮೇಲೆ ನಿನ್ನ ಪ್ರಕೃತಿಯಬಗ್ಗೆ ನಿನ್ನನ್ನು ಕೇಳುವ ಪ್ರಸಂಗವೇ ನನಗೆ ಬರಬಾರದಾಗಿತ್ತು. ( ಉಸುರು ಗರೆದು ) ತಂಗೀ, ನಿನ್ನನ್ನು ನೋಡಿದ ಕೂಡಲೆ, ವಸಂತನ ಹೆಂಡತಿಯಾದ ಗಜರಾಬಾಯಿಯನ್ನು ನೋಡಿದಂತಾಗುವದಿಲ್ಲ; ಅಥವಾ ಸಣ್ಣವಳಿದ್ದಾಗ ಸಂಜೀವನಕೂಡ ಆಡುತ್ತಿದ್ದ ಗಜರೆಯನ್ನು ಕಂಡಂತಾಗುವದಿಲ್ಲ; ಆದರೆ ಅಂದು ಮಧ್ಯರಾತ್ರಿಯಲ್ಲಿ ವಿಜಯ ವಿಠ್ಠಲನ ಹಾಳು ಗುಹೆಯೊಳಗೆ, ಕಣ್ಣುಗಳನ್ನು ತೆರೆಯದೆ, ನೆಲಕ್ಕೆ ಗೋಣು ಚಲ್ಲಿ, ಹೊಟ್ಟೆಯೊಳಗೆ ಕೈಕಾಲು ಸೇರಿಸಿಕೊಂಡು ನೀರೊಳಗೆ ಬಿದ್ದ ಗುಬ್ಬಿಯಹಾಗೆ, ಮೃತ್ಯುವಿನ ಕೈಗೆ ಸಿಕ್ಕು, ಚಡಪಡಿಸುತ್ತ, ಮಲಗಿದಂಥ ಒಬ್ಬ ಹೆಂಗಸಿನ ಆಕಾರವು ನನ್ನ ಕಣ್ಣೆದುರಿಗೆ ಕಟ್ಟಿದಂತಾಗುವದು. ಗಜರಾ, ಆಹೊತ್ತು ನಿನ್ನ ಮೋರೆಯ ಮೇಲಿದ್ದ ಕಳೆಗುಂದಿದ ಛಾಯೆಯು ಇಂದಿಗೂ ಹೋಗಿಲ್ಲ. ಅದು ಎಂದು ಹೋಗುವದೋ ಏನೋ ( ಉಸುರು ಗರೆಯುತ್ತಾನೆ. )

ಗಜರಾ—ಅಣ್ಣಾ ನನ್ನ ಸಲುವಾಗಿ ಇಷ್ಟು ಯಾಕೆ ಚಿಂತೆ ಮಾಡುವಿ? ಹೆಣ್ಣಿನ ಜನ್ಮವು ಇದ್ದರೂ ಅಷ್ಟೇ ಹೋದರೂ ಅಷ್ಟೇ. ಸತ್ತರೆ ನೀಗಿತು.

ಸಂಜೀವ—ತಂಗೀ ಸ್ತ್ರೀಜನ್ಮವು ಹೀಗೆ ಒಂದು ಕ್ಷುದ್ರ ವಸ್ತುವಾಗಿದ್ದರೆ ಅಂದೇ ಆ ಗುಹೆಯಲ್ಲಿ ನಿನ್ನನ್ನು ಬಿಟ್ಟು ಬರುತ್ತಿದ್ದೆನು. ನಮ್ಮನ್ನು ಹಡೆದು ಜೋಕೆ ಮಾಡಿದ ತಾಯಿಯು ಸ್ತ್ರೀಯಲ್ಲವೇ? ನಮ್ಮನ್ನು ಈ ಪರಿ

ಯಿಂದ ನಂಬಿ ಕಂಡಕೂಡಲೇ ಎದೆಕರಗುವಹಾಗೆ ನಮ್ಮಲ್ಲಿ ಕನಿಕರವನ್ನು ಹುಟ್ಟಿಸಿ ಯಾವಾಗಲೂ ನಮ್ಮ ಹಿತವನ್ನೇ ಬಯಸುವ ಭಗಿನಿಯರೆಲ್ಲರೂ ಸ್ತ್ರೀಯರಲ್ಲವೇ? ಹಾಗೂ ಒಂದುವೇಳೆ, ಬುದ್ಧಿಹೋಗಿ ಇವರಿಗೆ ಕೇಡು ಬಗೆಯಬೇಕೆಂದು, ನಾವು ಎಂಥ ಕ್ರೂರ ಕೃತ್ಯಗಳನ್ನು ಕೈಕೊಂಡರೂ ಪುನಃ ನಮ್ಮನ್ನೇ ಚಿಂತಿಸುವ ಸತಿಯರು ಸ್ತ್ರೀಯರಲ್ಲವೇ? ಗಜರಾ, ಈ ರೀತಿಯಿಂದ ತಮ್ಮ ಜೀವಕ್ಕೆ ತಾವೇ ಮಹತ್ವವನ್ನು ಕೊಡದಿರುವದೇ ಸ್ತ್ರೀಯರಿಗೆ ಮುಖ್ಯ ಭೂಷಣವು. ಅದೇ ಅವರ ದೊಡ್ಡ ಗೌರವವು. ಅದೇ ಅವರ ಸೌಭಾಗ್ಯವು. ತಂಗೀ, ಅವರ ಗುಣಗಳೊಳಗಿಂದ ವಿನಯವನ್ನೊಂದು ಆರಿಸಿ, ತೆಗೆದುನೋಡು; ಆ ಮೇಲೆ ಅವರು ಸ್ತ್ರೀಯರೇ ಅಲ್ಲ. ಆದ್ದರಿಂದ ನಿನ್ನ ಜೀವವನ್ನು ನೀನು ದುರ್ಲಕ್ಷಿಸಬೇಡ. ನಿನಗೆ ಏನಾಗುವದೋ ಹೇಳು.

ಗಜರಾ—ಅಣ್ಣಾ. ನನಗೆ ಏನಾಗುವದೋ ತಿಳಿಯದು. ಆದರೆ ಇಷ್ಟು ಮಾತ್ರ ನಿಜವು :—

ಸಂಜೀವ—ಅನುಮಾನಿಸಬೇಡ ನಾನು ಅಣ್ಣನೆಂದು ನಂಬಿರುವಿ; ನನ್ನ ಹೊರ್ತು ನಿನ್ನ ಹೊಟ್ಟೆಯೊಳಗಿನ ಮಾತನ್ನು ಯಾರಿಗೆ ಹೇಳುವಿ? ಹೇಳು.

ಗಜರಾ—ಹೇಳಿದರೆ ನಿನಗೆ ಸಹನವಾಗಲಿಕ್ಕಿಲ್ಲ.

ಸಂಜೀವ—ಏನಾದರೂ ಸಹನಮಾಡಿಕೊಳ್ಳುವೆನು. ಚಿಂತಿಸಬೇಡ. ರೋಗಿಗೆ ಏನಾದರೂ ಉಪಾಯ ಮಾಡಬೇಕಾದರೆ, ಮೊದಲು ಬೇನೆಯೇನಿರುವದೋ ತಿಳಿದುಕೊಳ್ಳಲಿಕ್ಕೆಬೇಕು.

ಗಜರಾ—ನೀನು, ಯಾವ ಉಪಾಯವನ್ನೂ ಮಾಡಲಿಕ್ಕೆ ಹೋಗಬೇಡ; ಯಾಕಂದರೆ ಪುನಃ ಸ್ವಲ್ಪ ದಿವಸಗಳಲ್ಲಿಯೇ ನಾನು ಸಾವಿಗೆ ತುತ್ತಾಗುವೆನು.

ಸಂಜೀವ—ಇಂಥ ಮಾತುಗಳನ್ನಾಡಿ ನೀನು ನನ್ನನ್ನು ವಿಷಾದಪಡಿಸಬೇಡ. ನಿನಗೇನಾಗುವದು ಬಾಯಿಬಿಚ್ಚಿ ಹೇಳು ನಾನು ವೈದ್ಯನನ್ನು ಕರೆತರುವೆನು.

ಗಜರಾ—ನಿನಗೆ ಬೇಕಾದರೆ, ವೈದ್ಯನನ್ನು ಕರೆದುಕೊಂಡು ಬಾ. ನನಗೆ ಮಾತ್ರ ಬದುಕುವೆನೋ ಇಲ್ಲವೋ ಆಶೆಯಿಲ್ಲ.

ಸಂಜೀವ—ವೈದ್ಯನು ಏನುಹೇಳುವನೋ ನೋಡೋಣ. ಮೊದಲೇ ನಿರಾಶೆಯಾಗಬೇಡ. ಹಾಗಾದರೆ ನಾನು ವೈದ್ಯನನ್ನು ಕರೆದುಕೊಂಡು ಬರುವೆನು. ( ಹೋಗುತ್ತಾನೆ )

ಗಜರಾ—( ತನ್ನಷ್ಟಕ್ಕೆ ) ಪ್ರಾಣನಾಥರು ನನ್ನನ್ನು ಎಂದಾದರೂ ನೆನೆಸುತ್ತಿರಬಹುದಲ್ಲವೇ? ಹೃದಯವಲ್ಲಭರೇ, ನೀವು ಮಾತ್ರ ನನ್ನ ಹಾಗೆ ಅಸ್ವಸ್ಥರಾಗಬೇಡಿರಿ.

ಸಂಜೀವ—( ಒಳಗೆಬಂದು ) ಗಜರಾ ವೈದ್ಯರು ಬಂದರು, ತುಸು ಎದ್ದು ಕೂಡ್ರು.



ವೈದ್ಯ—( ಒಳಗೆ ಬಂದು ) ಇರಲಿ, ಇರಲಿ, ಅಮ್ಮಾ ನಿನಗೆ ಶ್ರಮವಾದೀತು. ಏಳಬೇಡ. ( ಪರೀಕ್ಷಿಸಿ ) ಒಳ್ಳೇದು. ಔಷಧಕೊಡುವೆನು. ಅಮ್ಮಾ ನಿನಗೆ ನೆಟ್ಟಗಾಗುವದು; ಏನೂ ಚಿಂತೆಮಾಡಬೇಡ.

ಗಜರಾ—ವೈದ್ಯರೇ ನಾನೇನು ಚಿಂತೆ ಮಾಡುವದಿಲ್ಲ- ಈ ನನ ಅಣ್ಣನು ಮಾತ್ರ ನನ್ನ ಸಲುವಾಗಿ ಬಹಳ ವ್ಯಾಕುಲನಾಗಿರುವನು.

ವೈದ್ಯ—ಛೇ ! ಸಂಜೀವರಾವ, ನೀವು ಏನೂ ಯೋಚಿಸಕೂಡದು. ಇವಳಿಗೆ ಏನೂ ಆಗುವದಿಲ್ಲ. ಸ್ವಲ್ಪದಿವಸಗಳಲ್ಲಿಯೇ ನಾನು ಇವಳನ್ನು ನೆಟ್ಟಗೆ ಮಾಡುವೆನು. ಔಷಧಕೊಡುವೆನು ಬನ್ನಿರಿ.

( ಇಬ್ಬರೂ ತುಸು ಮುಂದಕ್ಕೆ ಬರುತ್ತಾರೆ )

ಸಂಜೀವ—ವೈದ್ಯರೆ, ನಿಜವಾಗಿಹೇಳಿರಿ; ಇವಳ ಜೀವಕ್ಕೇನೂ ಭಯವಿಲ್ಲವಲ್ಲ !

ವೈದ್ಯ—ಇವಳ ರೋಗವು ಇನ್ನೂ ಬಾಲ್ಯಾವಸ್ಥೆಯಲ್ಲಿ ಇರುವದು. ಸ್ವಲ್ಪ ಜಾಗ್ರತೆಯಿಂದ ಉಪಚಾರ ಮಾಡಿದರೆ ಬದುಕುವಳು.

ಸಂಜೀವ—ನೀವು ಹೇಳಿದಂತೆ ಲಕ್ಷ್ಯಪೂರ್ವಕವಾಗಿ ಎಲ್ಲ ಉಪಚಾರಗಳನ್ನು ನಾನೇ ಮಾಡುವೆನು. ಆದರೆ ಬೇನೆಯಾದರೂ ಯಾವದು?

ವೈದ್ಯ—ಇವಳಿಗೆ ಕುಪಥ್ಯವಾದಂತೆ ತೋರುತ್ತದೆ. ಮೇಲಾಗಿ ಹೃದ್ರೋಗವೂ ಇದ್ದಂತೆ ತೋರುತ್ತದೆ.

ಸಂಜೀವ—( ತನ್ನಷ್ಟಕ್ಕೆ ) ಹಾ ! ವೈದ್ಯರು ಹೇಳಿದಹಾಗೇ ಇರಲಿಕ್ಕೆಬೇಕು.

ವೈದ್ಯ—ಸಂಜೀವರಾವ ಈಕೆಗೆ ಎಲ್ಲ್ಯಾದರೂ ವಿಷಪ್ರಯೋಗವಾಗಿದ್ದಿತೇನೋ ಎಂದು ಅನಿಸುತ್ತದೆ. ನಿಮಗೇನಾದರೂ ಸಂಶಯು? ಕೇಳಿರಿ.

ಸಂಜೀವ—ಸಂಶಯುವೇಕೆ? ಈಕೆಯೇ ತಕ್ಕೊಂಡಿದ್ದಳು.

ವೈದ್ಯ—ಆಹಾ ! ಅದು ಎಷ್ಟೇ ಇರಲಿ; ಈಗಾದ ಪರಿಣಾಮವೆಲ್ಲಾ ಅದರದೇ. ಬನ್ನಿರಿ; ಔಷಧಕೊಡುವೆನು.

( ಇಬ್ಬರೂ ಹೋಗುತ್ತಾರೆ. )

ಗಜರಾ—( ತನ್ನಷ್ಟಕ್ಕೆ ) ಸಂಜೀವನು ಯಾಕೆ ವ್ಯರ್ಥವಾಗಿ ಶ್ರಮ ಪಡುವನು ? ದುರ್ದೈವವು ನನ್ನನ್ನು ಬಿಟ್ಟುಬಿಡದೆ ಹಿಂಬಾಲಿಸಿರಲು, ಇವನ ಪ್ರಯತ್ನಗಳು ಎಲ್ಲಿಗೆ ಮುಟ್ಟುವವು? ಇರಲಿ, ಅದೊಂದು ಅಂತಃಕರಣದ ಜೀವನವು. ನನ್ನ ಈ ಸ್ಥಿತಿಯನ್ನು ನೋಡಿ, ಅವನಿಗೆ ಸಹನವಾಗುವದಿಲ್ಲ. ಏನು ಮಾಡಲಿಚ್ಛಿಸುವನೋ ಮಾಡಲಿ.

ಸಂಜೀವ—( ಒಳಗೆಬಂದು ) ಗಜರಾ, ಈಗ ನಿನಗೆ ಸ್ವಸ್ಥವೆನಿಸುವ ದಷ್ಟೇ ?

ಗಜರಾ—ಹಾ ! ಅವನಿಗೆ ತಿಳಿದಿರಬಹದು. ನಿನಗೇನಾದರೂ ಹೇಳಿ ದನೇನು ?

ಸಂಜೀವ—ಗಜರಾ ಏನನ್ನುವಿ ?

ಗಜರಾ—ಆ ವೈದ್ಯನಿಗೆ ನನ್ನ ಎಲ್ಲ ದುರ್ಲಕ್ಷಣಗಳು ತಿಳಿದಿದ್ದಾವು. ನಿನಗೇನಾದರೂ ಹೇಳಿದನೇನು?

ಸಂಜೀವ—ಗಜರಾ ನೀನು ವ್ಯರ್ಥವಾಗಿ ಅಂಜಿರುವಿಯಲ್ಲ? ವೈದ್ಯ ನು ನಿನಗೆ ನಿಶ್ಚಿತವಾಗಿ ನೆಟ್ಟಗಾಗುವದೆಂದು ಹೇಳಿರುವನು.

ಗಜರಾ—ಇಲ್ಲ. ಹಾಗಾದರೆ, ನನ್ನ ಜೇನೆಯ ಲಕ್ಷಣಗಳು ಅವನಿಗೆ ಚನ್ನಾಗಿ ತಿಳಿದಿಲ್ಲ. ನನಗೆ ಮಾತ್ರ ತಿಳದಿರುವವು. ಆದ್ದರಿಂದಲೇ ಬಹಳ ದಿವಸಗಳಿಂದ ನನ್ನ ಮನಸ್ಸಿನಲ್ಲಿರುವ ಒಂದು ಆಶೆಯನ್ನು ನಾನು ಪರಿ ಪೂರ್ಣ ಮಾಡಿಕೊಳ್ಳಲೊಲ್ಲೆನು.

ಸಂಜೀವ—ಆ ನಿನ್ನ ಆಶೆಯಾವದು ?

ಗಜರಾ—( ದುಃಖಿಸುತ್ತ ) ಅತಿಗುಪ್ತವಾಗಿ ನನ್ನ ತಾಯಿಗೆ ನಾ ನು ಜೀವದಿಂದಿರುವದನ್ನು ತಿಳಿಸಿ ಅವಳನ್ನು ಇಲ್ಲಿಗೆ ಬರಮಾಡಿಕೊಳ್ಳಬೇಕೆಂ ದು ನನ್ನ ಆಶೆಯಿತ್ತು. ಆದರೆ ಅವಳನ್ನು ಕರೆಯಿಸಿಕೊಂಡು ಏನು ಉಪಯೋ ಗ? ಸಂಜೀವಾ ನಾನು ಸತ್ತೆನೆಂದು ಕೇಳಿ ಈಗ ಅವಳಿಗೆ ಹೇಳಲಾರದಷ್ಟು ದುಃಖವಾಗಿದ್ದೀತು. ಇನ್ನು ಮೇಲೆ ನಾನು ಬದುಕಿರುವ ವೃತ್ತಾಂತವನ್ನು ಕೇಳಿದರೆ, ಆಕೆಗೆ ಕೆಲವುಕಾಲ ಆನಂದವಾಗಬಹುದು. ಆದರೆ, ನಾನೆಲ್ಲಿ ಬಹಳ ದಿವಸ ಬದುಕಬೇಕಾಗಿದೆ? ಇಂದಿಲ್ಲ ನಾಳೆ ಸಾಯುವವಳೇ. ನನ್ನ ತಾಯಿಯು ಕಣ್ಣೆದುರಿಗೆ ಸತ್ತರೆ ಅವಳು ಮತ್ತಿಷ್ಟು ಎದೆಯೊಡಕೊಂಡಾಳು.

ಆದ್ದರಿಂದ, ವಿಧಿಯೇ, ನನ್ನ ತಾಯಿಯನ್ನು ಕರೆಯಿಸುವ ಕಲ್ಪನೆಯನ್ನು ಇನ್ನೊಮ್ಮೆ ನನ್ನ ಮನಸ್ಸಿನಲ್ಲಿ ತರಬೇಡ. ಅಯ್ಯೋ ದೈವವೇ!

( 'ಅಹಂಕಾರಮಾರ್ಝಾ' ಎಂಬಂತೆ )

ಅಳಲು ಹೆಚ್ಚಿಸಲ್ಕೆ। ಕೆಲವು ನಿಮಿಷಯಾಕೆ। ಕೊಡುವಿನೀ। ತಾಯಿಗೆ ಈ ಕೂಸನು ॥ ಪಲ್ಲ ॥

ಕನಸಿನೊಳ್ ತೋರಿಸಿ। ಕೊನೆಗೆಚ್ಚರಾದಾಗ। ಮನದ ಚಿಂತೆಯ ಬೆಳಿಸಿ ಕೇಡೇಕೆ ಬಗೆವೆ ದೈವವೇ। ತಾಯಿಗೇ ಈ ಕೂಸಿನಿಂ ॥ ೧ ॥

ಅಕಟಿಷ್ಟರೊಳು ನೀನು। ಪ್ರಕಟವಮಾಡಲು ಬೇಡ।
ವಿಕಟಶೋದಕ ದ್ವಿತೀಯಾವೃತ್ತಿಯನ್ನು ದೈವವೆ।
ತಾಯಿಗೆ ಓದುವದಕೆ ॥ ೨ ॥

ಸಂಜೀವ—ಛೇ! ಛೇ! ಇಂಥ ಕೆಟ್ಟ ಕಲ್ಪನೆಗಳಿಗೆ, ನೀನು ನಿನ್ನ ಮನಸ್ಸಿನಲ್ಲಿ ಎಳ್ಳಷ್ಟಾದರೂ ಆಸ್ಪದಕೊಡಬೇಡ. ನಿನ್ನ ತಾಯಿಯನ್ನು ಕರೆಕಳಿಸುವ ದಿನವು ಬಂದೇ ಬರುವದು. ಸುಳ್ಳಲ್ಲ; ವೈದ್ಯನು ನಿನಗೆ ನಿಶ್ಚಯದಿಂದ ನೆಟ್ಟಗಾಗುವದೆಂದು ಹೇಳಿರುವನು.

ಗಜರಾ—ನನಗಾದರೂ ಹೆಚ್ಚಿನದೇನು ಬೇಕು? ( ದುಃಖಿಸುತ್ತ ) ಸಂಜೀವಾ ನನ್ನ ಹೊಟ್ಟೆಯೊಳಗಿನ ಮಾತನೊಂದು ಹೇಳುವೆನು. ನನ್ನ ತಾಯಿಯ ಸಲುವಾಗಿ, ನನಗೆ ಬದುಕಿರಬೇಕೆಂಬ ಇಚ್ಛೆಯುಂಟು. ಹೇಗಾದರೂ ಮಾಡಿ ಇನ್ನೊಮ್ಮೆ ನನ್ನನ್ನು ಮರಣದ ಕೈಯ್ಯೊಳಗಿಂದ ಪಾರು ಮಾಡು.

ಸಂಜೀವ—ಗಜರಾ ನೀನು ಧೈರ್ಯ ಕಳೆದುಕೊಳ್ಳಬೇಡ. ನಿನಗೆ ನೆಟ್ಟಗಾಗುವದರಲ್ಲಿ ಸಂದೇಹವಿಲ್ಲ. ಮಾತ್ರ ವೈದ್ಯರು ಹೇಳಿದಂತೆ ನಡೆಯಬೇಕು.

ಗಜರಾ—ವೈದ್ಯನು ಏನು ಮಾಡಲಿಕ್ಕೆ ಹೇಳಿರುವನು?

ಸಂಜೀವ—ಇಕೋ, ಈ ಔಷಧವನ್ನು ಕೊಟ್ಟಿರುವನು.

ಗಜರಾ—ಇದನ್ನು ತಕ್ಕೊಳ್ಳುವೆನು. ಇದಕ್ಕೆ ಪಥ್ಯವೇನು.

ಸಂಜೀವ—ಸಾತ್ವಿಕವಾದ ಆಹಾರವನ್ನಷ್ಟೇ ತಕ್ಕೊ. ಯಾತರ ವಿಷಯವಾಗಿಯೂ ಬಹಳ ವಿಚಾರ ಮಾಡಬೇಡ. ಆಟನೋಟಗಳಲ್ಲಿ ಕಾಲಕಳೆ. ಮುಖ್ಯವಾಗಿ ಮನಸಿಗೆ ಯಾವ ತ್ರಾಸನ್ನೂ ಮಾಡಿಕೊಳ್ಳಬೇಡ.

( ತೆರೆಯು ಬೀಳುತ್ತದೆ. )

## ೨ನೇ ಪ್ರವೇಶ.

ಸ್ಥಳ:—( ಸಂಜೀವರಾಯನ ಕೋಣೆ ).

( ಸಂಜೀವನು ಒಬ್ಬನೇ ಕುಳಿತಿರುತ್ತಾನೆ ).

ಸಂಜೀವ—( ತನ್ನಷ್ಟಕ್ಕೆ ) ಅಂತೂ ಇಲ್ಲಿಯ ವೈದ್ಯರು ಕುಶಲರೆನ್ನಬೇಕು. ಗಜರೆಯು ಔಷಧವನ್ನು ತಕ್ಕೊಳ್ಳಹತ್ತಿ ನಾಲ್ಕು ತಿಂಗಳುಗಳಾಗಬಂದವು. ಈಗ ಮುಕ್ಕಾಲುಪಾಲು ನೆಟ್ಟಗಾಗಿರುವದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಸಂಪೂರ್ಣ ನೆಟ್ಟಗಾಗಬೇಕಾದರೆ ಇನ್ನೂ ಎರಡು ಮೂರು ತಿಂಗಳುಗಳು ಬೇಕಾದಾವು. ಏನೂ ಚಿಂತೆಯಿಲ್ಲ ಮುಖ್ಯ ಮಾತೇನಂದರೆ. ಕೈಕೊಂಡ ಕೆಲಸದಲ್ಲಿ ಶ್ರೇಯಸ್ಸು ಬರುವಹಾಗೆ ಗಜರೆಯ ಜೀವರಕ್ಷಣವಾಗಬೇಕು. ಪೂರ್ಣವಾಗಿ ನೆಟ್ಟಗಾದಮೇಲೆ ಈಕೆಯನ್ನು ಈಕೆಯ ಗಂಡನಹತ್ತರ ಕಳುಹಿಸಿ, ಸುಖಿಯಾಗಿರುವಂತೆ ಮಾಡಿದರೆ, ಎಲ್ಲ ಕೆಲಸವೂ ಯಥಾಸ್ಥಿತನಾದಂತಾಯಿತು. ಆದರೆ ಈ ಸಂಗತಿಯು ಇಬ್ಬರಿಗೂ ತಿಳಿದಹಾಗೆ, ಅಕಸ್ಮಾತ್ತಾಗಿ ಘಟಿಸಿದಂತೆ ತೋರಿಸಲಿಕ್ಕೆಬೇಕು. ಇದಕ್ಕೇನಾದರೂ ಒಂದು ಹಂಚಿಕೆಯನ್ನು ಹುಡಕೋಣ. ( ವಿಚಾರಮಾಡುತ್ತ ನಿಲ್ಲುತ್ತಾನೆ ).

ದಾಸಿ—( ಒಳಗೆಬಂದು ) ಸಂಜೀವರಾಯರೇ, ಟಪಾಲಿನವನು ಈ ಪತ್ರವನ್ನು ತಂದುಕೊಟ್ಟನು. ( ಕೊಡುತ್ತಾಳೆ ).

ಸಂಜೀವ—( ಅದನ್ನು ಒಡೆದು ) ನಮ್ಮ ತಾಯಿಯ ಅಕ್ಷರಗಳಂತೆ ತೋರುತ್ತವೆ. ಏನು ಬರೆದಿರುವಳೋ ನೋಡೋಣ.

( ಓದುತ್ತಾನೆ ).

‘ ಚಿರಂಜೀವನಾದ ಸಂಜೀವನಿಗೆ ’ ಅನೇಕ ಆಶೀರ್ವಾದಗಳು. ನಿನ್ನ ತಂಗಿಯಾದ ಅವಂತಿಕೆಗೆ ಹದಿನಾರು ವರ್ಷಗಳು ತುಂಬುತ್ತ ಬಂದವು. ವರನನ್ನು ಹುಡುಕೆಂದರೆ, ನೋಡಿದ ಯಾವ ವರಗಳೂ ನಿನ್ನ ಮನಸಿಗೆ ಬರಲಿಲ್ಲ. ಈಗ ನನಗೊಂದು ವರನು ಗೊತ್ತುಂಟು. ಕೇಳು. ನಿಮ್ಮ ವಸಂತರಾಯನೇ ವರನಾಗಿದ್ದಾನೆ.

ಸಂಜೀವ—ಎಲಾ ಇದೇನು? ಮತ್ತೊಂದು ಸಂಕಟವು!

( ಮುಂದೆ ಓದುತ್ತಾನೆ ).

ಅವನ ಹೆಂಡತಿಯು ಸತ್ತು ಸುಮಾರು ನಾಲ್ಕು ತಿಂಗಳಾಗುತ್ತ ಬಂದವು. ಈಗ ಅವನು ಮದುವೆಮಾಡಿಕೊಳ್ಳಬೇಕೆಂದಿಚ್ಛಿಸುತ್ತಾನೆ. ಅವನ ಸ್ಥಿತಿಗತಿಯಂತೂ ನಿನಗೆ ಗೊತ್ತಿದ್ದದ್ದೇ. ಇಂಥ ಶ್ರೀಮಂತ ವರವು ನಮಗೆ ಎಂದೂ ಸಿಗಲಿಕ್ಕಿಲ್ಲ. ಮೇಲಾಗಿ, ತಾನಾಗಿಯೇ ನಮ್ಮ ಮನೆಗೆ ಕೇಳಬಂ

ದದರಿಂದ ಈ ಸಂಧಿಯನ್ನು ನಾವು ಕಳಕೊಳ್ಳತಕ್ಕದ್ದಲ್ಲ. ಎಲ್ಲವೂ ಗೊತ್ತಾದಂತೆಯೇ ಇರುವದು. ನೀನೊಬ್ಬನು ಬಂದು ನಿನ್ನ ಅನುಮತಿಯನ್ನು ಕೊಟ್ಟರೆ ತೀರಿತು. ಆದ್ದರಿಂದ ಬೇಗನೆ ಹೊರಟುಬಂದು ತಂಗಿಯ ಲಗ್ನಕಾರ್ಯವನ್ನು ತೀರಿಸಿಕೊಂಡು ಪುನಃ ನಿನ್ನ ಕೆಲಸಕ್ಕೆ ಹಾಜರಾಗು. ನಿನ್ನನ್ನು ಬೇಗ ಕಾಣಲಿಚ್ಛಿಸುವ, ನಿನ್ನ ತಾಯಿ.

'ರಮಾಬಾಯಿ'

ಎಲಾ ಇದೇನು? ಮತ್ತೊಂದು ಕಠಿಣಪ್ರಸಂಗವು! ಬೇಗನೇ ಹೋಗಿ ಈ ಮದುವೆಯನ್ನು ನಾನು ಮುರಿಯಲಿಕ್ಕೆಬೇಕು. ಇಲ್ಲದಿದ್ದರೆ ನಮ್ಮ ಕಾಲಮೇಲೆ ನಾವೇ ಕಲ್ಲುಚಲ್ಲಿಕೊಂಡಂತೆ ಆದೀತು. ಒಮ್ಮೆಲೇ ಅನರ್ಥವು ಸಂಭವಿಸೀತು. ಲಗ್ನದ ವಿಚಾರವಾದರೂ ನಡೆದಿರುವದೆಂಬ ಸುದ್ದಿಯು ಸಹ ಗಜರೆಯ ಕಿವಿಯಮೇಲೆ ಬೀಳಕೂಡದು. ಈಗೀಗ ಸ್ವಲ್ಪ ನೆಟ್ಟಗಾಗಿರುವಳು. ಈ ಸುದ್ದಿಯು ತಿಳಿದರೆ, ಪುನಃ ಒಮ್ಮೆಲೇ ಎದೆಯೊಡಕೊಂಡಾಳು. ಇಕೋ, ಇತ್ತಲೇ ಬರುವಳು. ಮೊದಲು ಈ ಪತ್ರವನ್ನು ಮುಚ್ಚಿಡುವೆನು.

ಗಜರಾ—( ಒಳಗೆಬಂದು ) ಅಣ್ಣಾ, ಯಾಕೆ? ಸಣ್ಣ ಮೋರೆಮಾಡಿರುವಿ?

ಸಂಜೀವ—ಛೇ! ಏನೂ ಇಲ್ಲ. ಇದೇ ಈಗ ನಮ್ಮ ಅವ್ವನಪತ್ರ ಬಂದಿತು.

ಗಜರಾ— ನಿಮ್ಮ ಅವ್ವನು ಏನು ಬರೆದಿರುವಳು?

ಸಂಜೀವ—ಏನೋ ಒಂದು ಅವಶ್ಯವಾದ ಕೆಲಸವಿರುವದಂತೆ. ಏನು ಕೆಲಸವೋ ನನಗೂ ತಿಳಿಯದು 'ಅಗತ್ಯವಾಗಿ ನೀನು ಬಂದು ಹೋಗೆಂ'ದು ಬರೆದಿರುವಳು?

ಗಜರಾ—( ಉಸುರುಗರೆಯುತ ತನ್ನಷ್ಟಕ್ಕೆ ) ನನ್ನ ಮುಂದೆ ಯಾವ ಮಾತನ್ನೂ ಬಚ್ಚಿಟ್ಟಿಲ್ಲ. ತನಗೇ ತಿಳಿಯದ್ದನ್ನು ಆ ಪ್ರಾಣಿಯಾದರೂ ಏನು ಹೇಳಿಯಾನು?

ಸಂಜೀವ—ಗಜರಾ, ಉಪಾಯವಿಲ್ಲ, ನಾನು ಹೋಗಲೇಬೇಕಾಗಿರುವದು. ನಾನು ಹೋಗದಿದ್ದರೆ, ಆಗತಕ್ಕಕೆಲಸವು ಆಗುವದಿಲ್ಲೆಂದು ಬರೆದಿರುವಳು. ನಾಲ್ಕಾರುದಿವಸಗಳಲ್ಲಿಯೇ ನಾನು ತಿರುಗಿ ಬರುವೆನು. ನೀನು ಚಿಂತೆ ಮಾಡಬೇಡ.

ಗಜರಾ—ಹೋಗಿಬಾ, ಮಾತ್ರ ಅಲ್ಲಿ ಹ್ಯಾಗೆ ನಿನಗೊಬ್ಬ ತಂಗಿಯಿರುವಳೋ, ಹಾಗೆ ಇಲ್ಲಿಯಾದರೂ ಒಬ್ಬ ತಂಗಿಯಿರುವಳು. ಅವಳನ್ನು ಮರೆಯಬೇಡ.

ಸಂಜೀವ—ಛೀ! ಛೀ! ನಾನು ನಿನ್ನನ್ನು ಎಂದಾದರೂ ಮರೆಯಬಹುದೇ? ಗಜರಾ, ನೀನು ಮರೆಯುವಂಥ ತಂಗಿಯೇ? ಅನಿರ್ವಾಹದಿಂದ ಹೊರಬಿದ್ದೇನೆ. ಹೋಗು ಅಳಬೇಡ. ನಮ್ಮ ದಾಸಿಯಾದ ಸುಶೀಲೆಯಾದರೂ ಒಳ್ಳೇ ಸ್ವಭಾವದವಳಿರುವಳು. ಮೇಲಾಗಿ ನಿನ್ನ ಹೊಸಗೆಳತಿಯಾದ ಈ ನೆರಮನೆಯ ಮಾಧವೀದೇವಿಯು ನಿನ್ನ ಮೇಲೆ ಬಹಳೇ ಪ್ರೇಮವನ್ನು ಮಾಡುತ್ತಾಳೆ. ಅವಳ ಕೂಡ ನಾಲ್ಕು ದಿವಸಗಳನ್ನು ಕಳೆ. ಊರೊಳಗಿನ ಕೆಲಸವು ತೀರಿದಕೂಡಲೇ ಬರುವೆನು. ಸುಮ್ಮನಾಗು ಅಳಬೇಡ.

ಗಜರಾ—ಏನಾದರೂ ಮಾಡಲೊಲ್ಲಿಯೇಕೆ. ನಾನಂತೂ ತಿಳಿದಿರುವೆನು, ಅಣ್ಣನೆಂದರೂ ನೀನೇ, ತಾಯಿತಂದೆಯೆಂದರೂ ನೀನೇ; ನನಗೆ ಎಲ್ಲವೂ ನೀನೇ. ಅಂದಮೇಲೆ ನಿನ್ನ ಕೆಲಸಕ್ಕೆ ನಾನು ಅಡ್ಡಿಮಾಡಬಾರದು ಹೋಗು. ಆದರೂ ಆದಷ್ಟು ಬೇಗಬಾ. ಅಂದರಾಯಿತು.

ಸಂಜೀವ—ಯಾಕಾಗವೊಲ್ಲದು. (ಹೋಗುತ್ತಾನೆ.)—

ಗಜರಾ—ಸಂಜೀವನಂತೂ ಹೊರಟುಹೋದನು. ಸುಶೀಲೆಯು ಹೊಸಬಳು. ಆತನು ಬರುವವರೆಗೆ ನಾನು ಇಲ್ಲಿ ಹ್ಯಾಗೆ ಕಾಲಕಳೆಯಬೇಕು? ಇಲ್ಲಿಯವರೆಲ್ಲರೂ ಹೊಸಬರು. ಅನಾಥರ ಹಾಡೇ ಹೀಗೆ.

(ರಾಗ—ಬಾಗೇಶ್ರೀ 'ಆತಾರಾಗದೇಯೀ' ಎಂಬಂತೆ)

ಜನ್ಮಯಾತ್ರೆಯು ವಿಫಲ ಜೊತೆಗೆ ಯಾರಿಲ್ಲದೆ।<br>
ಸುಮ್ಮನೇ ಭಾರಭೂಮಿಗೆ ನಿರುತವು॥ ॥ಪಲ್ಲ॥<br>
ತಿಳಿಯನೀರನು ಬಿಟ್ಟು। ಮಳಲಿನೋಳ್ ಬೀಳ್ವತಾಂ।<br>
ಬಳಲಿಬಿಸಿಲೊಳು ಸಾವಿ। ಗೆಳೆವ ಮೀನದವೋಲ್ ॥೧॥

## ೫ನೇ ಅಂಕು.

### ೧ ನೇ ಪ್ರವೇಶ.

ಸ್ಥಳಃ—ಊರೊಳಗಿನ ಸಂಜೀವರಾಯನ ಮನೆ.

( ಸಂಜೀವನೂ ಅವನ ತಂಗಿಯೂ ಕುಳಿತಿರುವರು. )

ಸಂಜೀವಃ—ತಂಗೀ ನಿಜವಾಗಿ ನೋಡಿದರೆ, ಈ ವಿವಾಹವು ಆಗ ಕೂಡದೆಂದು ನಾನು ಅನ್ನಲಾಗಿ ನಿನಗೆ ವಿಷಾದವೆನಿಸುವ ಕಾರಣವಲ್ಲ. ಯಾಕಂದರೆ ನಮ್ಮದಾಗದ ವಸ್ತುಪಿಗೆ ನಾವು ವ್ಯರ್ಥವಾಗಿ ಆಶೆ ಮಾಡ ಬಾರದು.

ಅವಂತಿಕಾಃ— ಇದರಲ್ಲಿ ನಮ್ಮದಾಗದ ವಸ್ತುವಾದರೂ ಯಾವದು? ಹಾಗೂ ನಾವು ತೀರ ಗತಿಗೆಟ್ಟವರ ಹಾಗೆ ಆಶೆಯನ್ನಾದರೂ ಎಲ್ಲಿ ಮಾಡಿ ರುವೆವು. ಹುಡುಕುವ ಬಳ್ಳಿ ಕಾಲಿಗೆ ತೊಡಕಿದಂತೆ ಅನಾಯಾಸವಾಗಿ ದೊರಕುವ ವಸ್ತುವನ್ನು ಯಾಕೆ ಸುಮ್ಮನೆ ಹೋಗಗೊಡಬೇಕು?

ಸಂಜೀವಃ—ಛೇ! ಇದೇ ನಿನ್ನ ತಪ್ಪು ತಿಳುವಳಿಕೆಯು. ಈ ವಸ್ತು ವು ಸುಸಾಧ್ಯವೆಂದು ತಿಳಿದಿರುವಿ? ಆದರೆ ಅದರಂಥ ಅಸಾಧ್ಯ ವಸ್ತುವು ಯಾವದೂ ಇಲ್ಲ.

ಅವಂತಿಕಾಃ—ಏನೋ ನೀನು ಎಲ್ಲವನ್ನೂ ವಿಪರೀತವಾಗಿ ಹೇಳ ಹತ್ತಿರುವಿ. ನೀನು ಅಂದದ್ದು ನನಗೆ ಏನೂ ತಿಳಿಯಲೊಲ್ಲದು.

ಸಂಜೀವಃ—ಅವಂತಿಕಾ, ಇದು ನಿನಗೆ ತಿಳಿಯುವ ವಿಷಯವೇ ಅಲ್ಲ. ಆದುದರಿಂದ ಅದರ ಗೋಜಿಗೆ ಹೋಗದೆ, ನನ್ನ ಮಾತಿನಮೇಲೆ ವಿಶ್ವಾಸವಿಟ್ಟು ಸುಮ್ಮನಿರು.

ಅವಂತಿಕಾಃ—ಯಾಕಾಗಲೊಲ್ಲದು. ನೀನು ಹೇಳಿದಹಾಗೆ ಕೇಳ್ವ ವೆನು. ಆದರೆ, ಒಮ್ಮಿಂದೊಮ್ಮೆಲೇ ನೀನು ಈ ಕಾರ್ಯಕ್ಕೆ ಪ್ರತಿಕೂಲ ವಾಗಲಿಕ್ಕೆ ಕಾರಣವೇನು?

ಸಂಜೀವ:— ತಂಗೀ, ಇದಕ್ಕೆ ನೀನು ಕಾರಣವನ್ನು ಕೇಳಬಾರದ್ನಾ ಗಿತ್ತು. ನಾನು ನಿನ್ನ ಅಣ್ಣನು; ತಂದೆಯು ತೀರಿಕೊಂಡಂದಿನಿಂದ ನಿನ ಪಾಲಕನು; ನಿನ್ನ ಹಿತಾಹಿತವನ್ನು ನೋಡುವವನು. ಈ ಲಗ್ನದ ವಿಷಯು ವಾಗಿ ನಾನು ಎಷ್ಟು ವಿಚಾರಿಸಿರುವೆನೋ, ನನಗೆ ಎಷ್ಟು ಗೊತ್ತುಂಟೋ, ಅಷ್ಟು ನಿನಗೆ ತಿಳಿಯದು. ಆದ್ದರಿಂದ ನಾನು ಹೇಳಿದ ಹಾಗೆ ಕೇಳು.

ಅವಂತಿಕಾಃ—ಬಿಡು ನನಗೆ ಹೇಳದಿದ್ದರೂ ಅವ್ವನು ಕೇಳಿದಾಗ ಎಲ್ಲ ವೃತ್ತಾಂತವನ್ನು ಹೇಳುವಿಯಷ್ಟೇ. ನನಗೊಬ್ಬಳಿಗೇ ಮಾತ್ರ ತಿಳಿಯಬಾರ ದಾಗಿದ್ದರೆ ಉಪಾಯವಿಲ್ಲ. ಹಾಗಿದ್ದರೆ, ನನಗೆ ಕೇಳಲು ಇಚ್ಛೆಯೂ ಇಲ್ಲ.

ಸಂಜೀವಃ—ಆ ಎಲ್ಲ ವೃತ್ತಾಂತವನ್ನು ಯಾರಿಗೂ ಹೇಳುವ ಹಾಗಿಲ್ಲ

ಅವಂತಿಕಾಃ—( ತನ್ನಷ್ಟಕ್ಕೆ ) ಅಂಥಾದ್ದೇನು ಆಗಿರಬಹುದು? ಅವ್ವ ಯ್ಯಾ ಹಾಗಾದರೆ ನಾನೊಲ್ಲನವ್ವಾ! ವಸಂತರಾಯನು ಅಷ್ಟು ಉದ್ಧ ನೀರಿನವನಿರಬಹುದೇನು? ಆದ ಸಂಗತಿಯಾದರೂ ಏನಿರಬಹುದು? ವಸಂತರಾಯನಲ್ಲಿ ಅಣ್ಣನು ಅಂಥ ದೊಡ್ಡ ಯಾವ ಕುಂದನ್ನು ಕಂಡು ಹಿಡಿದಿರಬಹುದು? ಇತ್ತಕಡೆಗೆ ಅವ್ವನು ಬರುತ್ತಾಳೆ ಅವಳ ಮುಂದೇನಾದರೂ ಹೇಳುವನೇನೋ ನೋಡೋಣ. ( ಪ್ರಕಾಶವಾಗಿ ) ಅಣ್ಣಾ ಅವ್ವನು ಬಂದಳು ನೀವಿಬ್ಬರೇ ಮಾತಾಡಬೇಕಾಗಿದ್ದರೆ, ನಾನು ಹೊರಟು ಹೋಗುವೆನು.

ಸಂಜೀವಃ—ಛೀ! ಛೀ! ನಾವು ಏನೂ ಗುಪ್ತವಾಗಿ ಮಾತಾಡುವದಿಲ್ಲ. ನೀನೇಕೆ ಹೋಗುವಿ? ಇಲ್ಲಿಯೇ ಕುಳಿತುಕೋ.

ರಮಾಬಾಯಿಃ—( ಒಳಗೆಬಂದು ) ಸಂಜೀವಾ ವಸಂತರಾಯನಿಗೆ ಈಕೆಯನ್ನು ಕೊಡುವದು ನಿನ್ನ ಮನಸ್ಸಿಗೆ ಏಕೆ ಬರವೊಲ್ಲದೋ ತಿಳಿಯದಪ್ಪಾ! ಗೊತ್ತಿದ್ದನ್ನೆಲ್ಲ ನನಗೆ ಒಡೆದು ಹೇಳಿದರೆ, ಮನಸಿಗೆ ಸಮಾಧಾನವಾಗುವದು.

ಸಂಜೀವಃ—ಅವ್ವಾ, ಇದೊಂದುಸಾರೆ ಮಾತ್ರ ನಾನು ನಿನ್ನ ಮಾತನ್ನು ಮೀರಬೇಕಾಗುತ್ತದೆ. ಅದಕ್ಕಾಗಿ ನನ್ನನ್ನು ಕ್ಷಮಿಸು. ಅವಂತಿಕೆಯನ್ನು ವಸಂತರಾಯನಿಗೆ ಕೊಡಬೇಡೆಂದು ನಾನು ಹೇಳುವೆನು. ಯಾಕೆಂದು ಹಟಹಿಡಿದರೆ ಮಾತ್ರ ನಾನು ಉತ್ತರಕೊಡಲಾರೆನು.

ರಮಾಃ—ಅದೇಕೆ? ನನ್ನ ಮುಂದೆ ಹೇಳದಂಥ ಮಾತೇನು?

ಸಂಜೀವಃ—ಅವ್ವಾ ಆ ಮಾತನ್ನು ನಾನು ಯಾರಿಗೂ ಹೇಳುವದಿಲ್ಲೆಂದು ನನ್ನ ವಚನ ಹೋಗಿದೆ.

ರಮಾಃ—ವಸಂತರಾಯನಿಗೆ ಮಗಳನ್ನು ಕೊಡುವೆನೆಂದು ನನ್ನ ವಚನವಾದರೂ ತೊಡಕಿದೆ.

ಸಂಜೀವಃ—ನಿನ್ನ ಮಾತು ತಪ್ಪಿಸಲಿಕ್ಕೆ ಬರುವಹಾಗಿದೆ.

ರಮಾಃ—ನಿನ್ನದು ಇಲ್ಲವೇನು?

ಸಂಜೀವಃ—ಹೌದು ನನ್ನ ವಚನವನ್ನು ಮುರಿದು ಎಲ್ಲ ವೃತ್ತಾಂತವನ್ನು ಹೇಳಲಿಕ್ಕೆ ಬರುವಹಾಗಿಲ್ಲ.

ರಮಾಃ—ಇಂಥ ದೊಡ್ಡ ಕೆಲಸದಲ್ಲಿ ಒಬ್ಬರಿಗೊಬ್ಬರು ಹೇಳದೆ ಮಾತು ಮುಗಿಯುವ ಜಗೆಯಾವದರೂ ಹೇಗೆ? ನೀನು ವಚನಕೊಟ್ಟದ್ದಾದರೂ ಯಾರಿಗೆ?

ಸಂಜೀವಃ—ಹೇಳಿದರೆ ದೊಡ್ಡ ಅನರ್ಥವು ಸಂಭವಿಸೀತು. ಅದರಿಂದ ನಮಗೇನೂ ಹಾನಿಯಾಗುವದಿಲ್ಲ. ಆದರೆ ಒಬ್ಬ ಬಡಪ್ರಾಣಿಯ ಮೇಲೆ ಮಾತ್ರ ಮುಗಿಲು ಕಡಕೊಂಡು ಬಿದ್ದಂತಾಗುವದು. ನಿನಗೆ ಆ ವೃತ್ತಾಂತವನ್ನು ಹೇಳಿ, ಅನಿಮಿತ್ತವಾಗಿ ಆ ವ್ಯಕ್ತಿಯ ವೈರತ್ವವನ್ನು ಯಾಕೆ ಕಟ್ಟಿಕೊಳ್ಳಲಿ?

ರಮಾಃ—ಬಿಡು, ಹೇಳದಿದ್ದರೆ ಬಿಡು. ಮಾತ್ರ ನನ್ನ ವಚನದಂತೆ ನಾನಾದರೂ ನಡೆಯಬೇಕಾಗುವದು.

ಸಂಜೀವಃ—ನಿನ್ನ ವಚನದಂತೆ ನೀನು ನಡೆದರೆ, ಇದಕ್ಕೂ ಹೆಚ್ಚಿನ ಅನರ್ಥವಾದೀತು. ನಾನು ಆ ಕಥೆಯನ್ನೆಲ್ಲ ಹೊರಗೆಡವಿದರೆ ಆ ಬಡಪ್ರಾಣಿಗೆ ಒಬ್ಬಳಿಗೇ ಕೇಡಾಗುವದು. ಆದರೆ ಈ ಮದುವೆ ಯಾದರೆ ಮಾತ್ರ ನಮ್ಮೆಲ್ಲರಿಗೂ ಒಮ್ಮೆಲೇ ದೊಡ್ಡ ಅನರ್ಥವು ಸಂಭವಿಸಬಿರದು. ಅವ್ವಾ ಮದುವೆಯಾದಮೇಲೆ, ನೀನು ನನ್ನನ್ನು ಕರೆಯಿಸಲಿಲ್ಲ. ಇದೇ ನನ್ನ ಮೇಲೆ ದೊಡ್ಡ ಉಪಕಾರವಾದಂತಾಯಿತು. ಒಂದುವೇಳೆ ನನಗೆ ತಿಳಿಯದೆ ಈ ಮದುವೆಯು ಆಗಿದ್ದರೆ, ಬಂದ ಸಂಕಟದಿಂದ ಪಾರಾಗಲಿಕ್ಕೆ ನನಗೆ ಒಂದು ಮಾರ್ಗವು ಮಾತ್ರ ಉಳಿಯುತ್ತಿತ್ತು. ಮತ್ತು ಆ ಮಾರ್ಗವನ್ನು ಹಿಡಿಯಲಿಕ್ಕೆ ನಾನು ಹಿಂಜರಿಯುತ್ತಿದ್ದಿಲ್ಲ.

ರಮಾಃ—ಆಗಿದ್ದರೆ ನೀನು ಏನು ಮಾಡುತ್ತಿದ್ದಿ, ಹೇಳು.

ಸಂಜೀವಃ—ವಸಂತರಾಯನಿಗೆ ಮೋರೆತೋರಿಸದಹಾಗೆ, ನಿಮ್ಮೆಲ್ಲರನ್ನೂ ಕಟ್ಟಿಕೊಂಡು ಸುಮ್ಮನೇ ದೂರದೇಶಕ್ಕೆ ಹೊರಟು ಹೋಗುತ್ತಿದ್ದೆನು. ಆ ಮೇಲೆ ವಸಂತರಾಯನಾಗಲಿ ನಾನು ಹೇಳುವ ಆ ವ್ಯಕ್ತಿಯಾಗಲಿ ಜೀವದಿಂದಿರುವವರೆಗೆ, ಪುನಃ ಈ ಊರಿಗೆ ಬರುತ್ತಿದ್ದಿಲ್ಲ. ಅವ್ವಾ, ಹೆಚ್ಚಿಗೇನು? ನೀನು ಹೇಗೆ ಇವಳ ಹಿತವನ್ನು ಚಿಂತಿಸುವಿಯೋ, ಹಾಗೇ ನಾನಾದರೂ ಚಿಂತಿಸುವೆನು. ನೀನು ಹೇಗೆ ಇವಳಿಗೆ ಅತ್ಯಂತ ಸಮೀಪದ ಸಂಬಂಧಿಕಳೋ, ಹಾಗೆ ನಾನಾದರೂ ಸಂಬಂಧಿಕನು. ಹೀಗಿರಲು ನನ್ನಂಥವನು ಎಂದಾದರೂ ಇವಳಿಗೆ ಅಹಿತವನ್ನು ಬಗೆಯ ಬಹುದೆ? ಆದ್ದರಿಂದ ಕೈ ಜೋಡಿಸಿ ಇನ್ನೊಮ್ಮೆ ಹೇಳುತ್ತೇನೆ. ನನ್ನಲ್ಲಿ ಸಂಪೂರ್ಣವಾಗಿ ವಿಶ್ವಾಸವನ್ನಿಟ್ಟು ನನ್ನ ಮಾತನ್ನು ನಡಿಸು. ಅವಂತಿಕೆಗೆ ಕಲ್ಯಾಣವಾಗಬೇಕಾಗಿದ್ದರೆ, ಅವಳನ್ನು ವಸಂತನಿಗೆ ಕೊಡಬೇಡ. ಇಷ್ಟು ಮೀರಿ, ನೀನು, ಅಜ್ಞಾನದಿಂದಾಗಲಿ, ಹೆಂಗಸರಲ್ಲಿರುವ ಈ ತರದ ಹಟಮಾರಿತನದಿಂದಾಗಲಿ, ಅಥವಾ ಅವನು ಚಲುವನಿರುವನು ಚಿಕ್ಕವನಿರುವನು, ಶ್ರೀಮಂತನಿರುವನು, ಮುಂತಾದ ಆಶೆಗೆ ಒಳಗಾಗಿಯಾಗಲಿ, ಅವಂತಿಕೆಯನ್ನು

ವಸಂತನಿಗೆ ಕೊಡಲು ಸಿದ್ಧಳಾದರೆ ನಾನು ನಿನಗೆ ಖಂಡಿತವಾಗಿ ಹೇಳು ವೆನು, ಏನಾದರೂ ವಿಘ್ನತಂದು ಈ ಮದುವೆಯನ್ನು ಮುರಿದೇನು; ಅವಂತಿಕೆಗೆ ಎಂದಿಗೂ ವಸಂತರಾಯನ ಕೈ ಹಿಡಿಯಗೊಡಲಿಕ್ಕಿಲ್ಲ.

ರಮಾ:—ಬಿಡು; ಬಿಡು. ನಾನಾದರೂ ಅವನಿಗೇ ಕೊಡಬೇಕೆಂದು ಎಲ್ಲಿ ಹಟತೊಟ್ಟಿರುವೆನು. ನಿನ್ನ ಮನಸ್ಸಿಗೆ ಬಾರದಿದ್ದರೆ, ಬಿಟ್ಟುಬಿಡು. ಆದರೆ ಕೊಟ್ಟ ವಚನವನ್ನು ಮಾತ್ರ ಮೀರುವದು ಸ್ವಲ್ಪ ಕಷ್ಟ.

ಸಂಜೀವ:—ನೀನು ವಚನ ಕೊಟ್ಟಾಗ ವಸಂತನ ಹೊರತು ಯಾರಾದರೂ ಇದ್ದರೋ ಹೇಗೆ?

ರಮಾ:—ಇದ್ದರು. ಅವನ ಗೆಳೆಯ ಹೇಮಂತನೊಬ್ಬನಿದ್ದನು.

ಸಂಜೀವ:—ಹೇಮಂತನು ಹೌದಲ್ಲೊ? ಅವನವೇನೂ ವಿಶೇಷ ಅಂಜಿಕೆಯಿಲ್ಲ.

ರಮಾ:—ಆದರೆ ವಸಂತನಿಗಾದರೂ ಏನು ಹೇಳಿ ಸುಮ್ಮನಿರಿಸುವಿ?

ಸಂಜೀವ:—ಈ ಲಗ್ನಕ್ಕೆ ನನ್ನ ಅನುಮತಿ ಇಲ್ಲವೆಂದು ಹೇಳುವೆನು. “ನನಗೆ ತಿಳಿಸದೆ ನನ್ನ ತಾಯಿಯು ವಚನ ಕೊಟ್ಟಿರುವಳು ಅವಳಿಗೆ ಏನೂ ಗೊತ್ತಿಲ್ಲ. ನನ್ನ ತಂಗಿಯನ್ನು ನಿನಗೆ ಕೊಡಲಿಕ್ಕೆ ನನ್ನ ಸಂಮತಿಯಿಲ್ಲ.” ಹೀಗೆಂದು ಅವನಿಗೆ ಸ್ಪಷ್ಟವಾಗಿ ಹೇಳುವೆನು. ಅವನದೇನು ಅಂಜಿಕೆ?

ರಮಾ:—ಆದರೆ ನಾನು ಮಾತ್ರ ಹೇಳಲಿಕ್ಕೆ ಬರುವದಿಲ್ಲ.

ಸಂಜೀವ:—ನೀನು ಬಿಡು. ನಾನೊಬ್ಬನೇ ಹೋಗಿ ಹೇಳಿಬರುವೆನು.

ರಮಾ:—ಅಪ್ಪಾ ನಿನಗೆ ಹೇಗೆ ತಿಳಿಯುವದೋ ಹಾಗೇ ಮಾಡು. ನೀನೇ ನಮ್ಮ ಮನೆಯ ಹಿರಿಯ. [ ತನ್ನಷ್ಟಕ್ಕೆ ] ಮಾತಾಡುವದರಲ್ಲಿ ಮನೆಯ ಕೆಲಸವೆಲ್ಲ ಹಾಗೆಯೇ ಉಳಿಯಿತು [ ಹೋಗುತ್ತಾಳೆ. ]

ಅವಂತಿಕಾ:—ಅಂಣಾ ವಸಂತರಾಯನಲ್ಲಿ ಅಂಥ ಕುಂದನ್ನು ನೀನು ಏನು ಕಂಡಿರುವಿ. ಯಾರಿಗೂ ಹೇಳದಂಥ ಆ ವೃತ್ತಾಂತವು ಯಾವದು? ಮತ್ತು ಹೇಳಿದರೆ ಆ ಬಡಪ್ರಾಣಿಗೆ ಕೇಡಾಗುವದು ಎಂದು ಅಂದಿ, ಅವಳು ಯಾರು?

ಸಂಜೀವ:—ಈ ಮದುವೆಯನ್ನು ಮುರಿಯುವದೇ ನಿಶ್ಚಿತವಾದ ಮೇಲೆ ಅದರ ಮಾತೇಕೆ.

ಅವಂತಿಕಾ:—ಛೇ! ಮದುವೆಯ ಮಾತು ಮುಗಿದಂತಾಯಿತು. ಇನ್ನುಮೇಲೆ ನನ್ನಮುಂದೆ ಹೇಳಲಿಕ್ಕೆ ಏನು ಅಡ್ಡಿಯದೆ? ಆ ಬಡಪ್ರಾಣಿಯು ಯಾರು?

ಸಂಜೀವ:—ಛೀ! ಅದನ್ನು ಹೇಳುವಹಾಗಿಲ್ಲ.

ಅವಂತಿಕ—ಇಲ್ಲ. ಅದನ್ನು ನನಗೆ ಹೇಳಲಿಕ್ಕೇಬೇಕು. ಎಲ್ಲ ವೃತ್ತಾಂತವನ್ನು ಹೇಳದಿದ್ದರೂ ಸ್ವಲ್ಪ ಹೇಳು.

ಸಂಜೀವ—ಇಲ್ಲ ಎಷ್ಟೂ ಹೇಳುವದಿಲ್ಲ.

ಅವಂತಿಕಾ—ಅವಳು ಯಾರು? ಆಕೆಯ ಹೆಸರನ್ನಾದರೂ ಹೇಳು.

ಸಂಜೀವ—ಊಂ ಹೂಂ! ಹೇಳಬಾರದು ಅವಳ ಹೆಸರನ್ನು ತಕ್ಕೊಂಡು ನೀನು ಏನು ಮಾಡುವಿ?

ಅವಂತಿಕಾ—ಹಾಗಾದರೆ ನನ್ನ ಮದುವೆಯನ್ನು ಮುರಿದ ಕಾರಣವನ್ನಾದರೂ ಹೇಳು.

ಸಂಜೀವ—ಮದುವೆಯು ಮುರಿದ ಕಾರಣವು ಈ ಎಲ್ಲ ಸಂಗತಿಗಳಿಗೆ ಸಂಬಂಧಿಸಿರುವದು; ಆದ್ದರಿಂದ ಯಾವದನ್ನೂ ಹೇಳುವದಿಲ್ಲ.

ಅವಂತಿಕಾ—ಊಂ ಹೂಂ! ಸ್ವಲ್ಪಾದರೂ ಹೇಳು. ಮದುವೆಯಾಗಿದ್ದರೆ ಏನಾಗುತ್ತಿತ್ತು?

ಸಂಜೀವ—ಊಂ ಹೂಂ! ಏನಾಗುತ್ತಿತ್ತೋ ನಿನಗೆ ಹೇಳಬಾರದು.

ಅವಂತಿಕಾ—ಊಂ ಹೂಂ! ನಾನು ಬಿಡುವದಿಲ್ಲ. ಹೇಳಲೇಬೇಕು. ಹೇಳದಿದ್ದರೆ ನನ್ನಾಣೆ.

ಸಂಜೀವ—ಛೀ! ಹುಚ್ಚೀ! ಆಣೆ ಇಟ್ಟುಕೊಳ್ಳಬಾರದವ್ವಾ.

ಅವಂತಿಕಾ—ಹಾಗಾದರೆ ಏನಾಗುತ್ತಿತ್ತೋ ಹೇಳು.

ಸಂಜೀವ—ವಸಂತರಾಯನನ್ನು ಮದುವೆಯಾಗಿದ್ದರೆ ನೀನು ಒಬ್ಬಳಿಗೆ ಸವತಿಯಾಗಬೇಕಾಗುತ್ತಿತ್ತು.

ಅವಂತಿಕಾ—(ತನ್ನಷ್ಟಕ್ಕೆ) ಅಪ್ಪಯ್ಯಾ! ನಾನೊಲ್ಲೆನವ್ವಾ! ಸವತಿಯ್ನು ಮೇಲೆ ಮದುವೆಯಾಗುವದು. ವಸಂತರಾಯನು ಮತ್ತೆ ಯಾವಳನ್ನಾದರೂ ಮದುವೆಯಾಗಿ ಬಿಟ್ಟಿರಬಹುದು. ಹಾಗಾದರೆ ಮದುವೆಯನು ಮುರಿದದ್ದೇ ನೆಟ್ಟಗಾಯಿತು.

ಸಂಜೀವ—ತಿಳಿಯಿತೇ?

ಅವಂತಿಕಾ—ತಿಳಿಯಿತು

ಸಂಜೀವ—ಇನ್ನು ಹೆಚ್ಚಿಗೆ ಇದರ ಬಗ್ಗೆ ಕೇಳಬೇಡ.

ಅವಂತಿಕಾ—ಅಣ್ಣಾ, ನೀನು ಇನ್ನು ಎಷ್ಟು ದಿವಸ ಇರುವಿ?

ಸಂಜೀವ—ನಾಲ್ಕಾರು ದಿವಸ.

ಅವಂತಿಕಾ—ನನ್ನನ್ನೂ ಅಪ್ಪನನ್ನೂ ಕರೆದುಕೊಂಡು ಹೋಗುವದಿಲ್ಲವೇನು?

ಸಂಜೀವ—ಅಲ್ಲಿ ನನ್ನ ಕೆಲಸವೇ ಸ್ಥಿರವಾಗಿಲ್ಲ- ಆದ ಬಳಿಕ ಕರೆದು ಕೊಂಡು ಹೋಗುವೆನು.

ಅವಂತಿಕಾ—ಎಂದು ಆಗುವದು?

ಸಂಜೀವ—ನಾಲ್ಕಾರು ತಿಂಗಳುಗಳಲ್ಲಿ.

ಅವಂತಿಕಾ—ಅಣ್ಣಾ ಇನ್ನೊಮ್ಮೆ ಬಂದಾಗ ನನಗೆ ಏನು ತಂದು ಕೊಡುವಿ?

ಸಂಜೀವ—ಏನು ತರಲಿ?

ಅವಂತಿಕಾ—ಏನು ತರುತ್ತೀ?

ಸಂಜೀವ—ಮುತ್ತಿನಂಥ ಒಬ್ಬ ಗಂಡನನ್ನು ತಂದು ಕೊಡುವೆನು.

ಅವಂತಿಕಾ—ಛೀ! ನಾನೊಲ್ಲೆ, ಹೋಗು ಹೀಗೆ ಮಾತಾಡಿದರೆ! ( ನಾಚಿಕೊಂಡು ಹೋಗುತ್ತಾಳೆ ).

ಸಂಜೀವ—ಅವಂತಿಕಾ! ನಿಲ್ಲು ನಿಲ್ಲು. ( ಹೋಗುತ್ತಾನೆ ).

---

## ೨ನೇ ಪ್ರವೇಶ.

( ಸ್ಥಳ—ಊರೊಳಗಿನ ಒಂದು ರಸ್ತೆ ).

( ಮನೋಹರನು ಸರಾಯಿ ಕುಡಿದು ಒಳಗೆ ಬರುತ್ತಾನೆ ).

ಮನೋಹರ—ಎಲಾ ಏನು ಹೊಡೆದೆಯೋ? ಇರಲಿ. ನಾನು ಒಂದು ಕೈ ತೋರಿಸೇನಂತೆ. ಎಲಾ ವಸಂತಾ ನೀನು ನನ್ನ ಮುದುಕೆಯನ್ನು ಪಿಸ್ತೂಲಿನಿಂದ ಹೊಡೆದು ಕೊಂದಿ. ನಾನು ನಿನ್ನ ಹೆಂಡತಿಯನ್ನು ಬಿಡುತ್ತೇನೆಂದು ತಿಳಿದಿರುವಿಯಾ? ನಿನ್ನನ್ನು ಆ ದಿವಸ ಹಾಗೆ ಬಿಡಬಾರದಾಗಿತ್ತು. ಅಯ್ಯಯ್ಯೋ! ಒಳಿತಾಗಿ ಪಾರಾದೆಯೋ! ಇರಲಿ. ಇನ್ನೊಮ್ಮೆ ನನ್ನ ಕೈಯ್ಯಲ್ಲಿ ಸಿಕ್ಕೀಯಂತೆ! ( ತುಸು ಹೊತ್ತು ಸುಮ್ಮನೆ ನಿಂತು, ) ಆ ಮಗನೊಬ್ಬ! ನಾಲ್ಕು ದಿವಸ ಇಟ್ಟುಕೋ, ಎಂದು ಕೈಯಲ್ಲಿ ವಸ್ತುಗಳನ್ನು ಕೊಟ್ಟರೆ, ಗಳಮ್ಮನೇ ನುಂಗಿ ಕುಳಿತನು. ನೋಡಿರಿ! ಎಂಥ ಅನ್ಯಾಯವಿದು. ಆ ಮುದುಕೆಯನ್ನು ಕೊಂದ ಪಾಪವು ನನಗೆ. ಆ! ನನಗೆ. ಪಾಪಪುಣ್ಯದ

ಅಂಜಿಕೆ ಇದ್ದರೆ ಇಷ್ಟೆಲ್ಲಾ. ಇರಲಿ. ರೂಢಿಯೊಳಗಿನ ಮಾತು. ಆ ಮುದುಕೆಯನ್ನು ಕೊಂದ ಪಾಪವು ನನಗೆ; ಅದರ ಲಾಭವು ಈ ಸೂಳೆಯ ಮಗನಿಗೆ; ನೋಡಿರಿ! ಎಂಥ ಅನ್ಯಾಯವನ್ನು ಮಾಡುತ್ತಾನೆ ದೇವರು! ಮತ್ತು ಆ ಬದುಕನ್ನು ಈಗ ನಾನು ಕೇಳಲಿಕ್ಕೆ ಹೋಗಲಿ; ಒಮ್ಮೆಲೇ ಪೋಲೀಸರನ್ನು ಬೆನ್ನು ಹಚ್ಚುತ್ತಾನೆ. ಯಾಕಂದರೆ ಮುಲಕೆಯ-ಮುಲಕೀ! ನಿನ್ನ ಹೆಸರು ತಕ್ಕೊಂಡ ಕೂಡಲೇ ಅಳುವಹಾಗಾಗುವದು. ಆ! ಆ! ಆ! ಮುಲಕೆಯ ಗೆಳೆತನವು ನನಗೊಬ್ಬನಿಗೇ ಇತ್ತು. "ಅವಳ ತಾಯಿಯೂ ಇಲ್ಲ; ಅವಳೂ ಇಲ್ಲ; ಅವಳ ಮನೆಯೊಳಗೆ ಯಾವ ವಸ್ತಗಳೂ ಇಲ್ಲ, ನಿನ್ನ ಹೊರ್ತು ಇದೆಲ್ಲ ಯಾರಿಗೆ ಗೊತ್ತುಂಟು"? ಎಂದು ಪೋಲೀಸರು ನನ್ನನ್ನೇ ಜಡಿದರು. ಆದರೆ ಹುಡುಕಿದಮೇಲೆ ನನ್ನ ಮನೆಯಲ್ಲಿ ಏನೂ ಶಿಗಲಿಲ್ಲ. ಆದ್ದರಿಂದ ನನ್ನನ್ನು ಬಿಟ್ಟುಬಿಟ್ಟರು. ಹೇಗಾದರೂ ಆ ಬದುಕನ್ನು ಹೇಮಂತನು ನನಗೇನು ಕೊಡುವದಿಲ್ಲ. ಆದ್ದರಿಂದ ಇದು ಅವನಿಗಾದರೂ ದಕ್ಕದಂತೆ ಮಾಡಬೇಕು. ಇದಕ್ಕೆ ಹೀಗೆ ಮಾಡಬೇಕು. (ವಿಚಾರಿಸಿ) ಇನ್ನೊಮ್ಮೆ ಪೋಲೀಸರು ನನ್ನನ್ನು ಕೇಳಲಿಕ್ಕೆ ಬಂದರೆ ಈ ಕತ್ತೆಯಮಗನ ಮನೆಯಲ್ಲಿ ಮುಲಕೆಯ ಆಭರಣಗಳು ಇರುವವೆಂದು ಹೇಳಿಬಿಡಬೇಕು. ಅಂದರೆ ಹೋಗುತ್ತಾನೆ ಹಳ್ಳಾಹಿಡಿದು. ಇರಲಿ, ಒಂದು ಸೇಡಂತೂ ತೀರಿದಂತಾಯಿತು. ಇನ್ನೊಂದು ಸೇಡು ಹೇಗೆ ತೀರಿಸಿಕೊಳ್ಳಬೇಕು? ವಸಂತನು ಸಾವಕಾರನಿರುವನು. ಅವನಿಗೆ ಮಂದಿಯ ಬೆಂಬಲವು ಬಹಳ. ಆದ್ದರಿಂದ ಅವನು ಒಬ್ಬನೇ ಕೈಗೆ ಸಿಗಲಿಕ್ಕಿಲ್ಲ. ಇನ್ನು ಇವನ ಹೆಂಡತಿಯು ಜೀವದಿಂದಿದ್ದಾಳಂತೆ. ಎಲ್ಲಿರುವಳೋ ಗೊತ್ತು ಹಚ್ಚುವೆನು. ಆಕೆಯು ಸತ್ತಿಲ್ಲ. ಇಷ್ಟು ಮಾತ್ರ ನನಗೆ ಗೊತ್ತುಂಟು. ಮುಲಕೆಯನ್ನು ಕೊಲ್ಲುವತನಕ ಜೀವದಿಂದಿದ್ದಳು. ಆ ಮೇಲೆ ಎಲ್ಲಿ ಹೋದಳೋ ಏನೋ! ಆ ಹೇಡಿಯಾದ ವಸಂತನು ಗಲ್ಲಿಗೇರಲಿಕ್ಕೆ ಹೆದರಿ ಮುಲಕೆಯೇ ತನ್ನ ಹೆಂಡತಿಯಾದ ಗಜರಾ ಎಂದು ಹೇಳಿ ಅವಳ ಹೆಣದ ಮೇಲೆ "ಅಯ್ಯೋ ನನ್ನ ಗಜರಾ! ಅಯ್ಯೋ ನನ್ನ ಪ್ರೀತಿಯ ಗಜರಾ!" ಎಂದು ಅತ್ತನಂತೆ. ಅಂದ ಮೇಲೆ ಗಜರೆಯು ಸತ್ತಿಲ್ಲ. ಎಲ್ಲಿಯಾದರೂ ಜೀವದಿಂದ ಇರಲಿಕ್ಕೆಬೇಕು. ಇವನೇ ಮುಚ್ಚಿಟ್ಟಿದ್ದರೂ ಇಟ್ಟಿರಬಹುದು. ಆದರೆ ಅವಳು ಎಲ್ಲಿರುವಳೋ! ಗೊತ್ತು ಹಚ್ಚುವದಾದರೂ ಹೇಗೆ? ಒಳ್ಳೇದು. ಸಿಕ್ಕಮೇಲೆ ಇವಳನ್ನು ಕೊಂದು ಶೇಡು ತೀರಿಸಿಕೊಳ್ಳಬೇಕೋ! ಅಥವಾ ಗಜರಾ, ನೀನು ನನಗೆ ಮತ್ತೊಬ್ಬ ಮುಲಕೆಯಾದೀಯಾ? ಹಾ! ಹಾಗಾಗಲಿಕ್ಕಿಲ್ಲ. ಹಿಂದಕ್ಕೆ ಇವರ ಮನೆಗೆ ನಾನು ಬಹಳ ಸಾರೆ ಹೋಗಿ ಬರುತ್ತಿದ್ದೆನು. ಆಗ ನಾನು ಇವಳನ್ನು ಪರೀಕ್ಷಿಸಿರುವೆನು. ನಿಜವಾಗಿ ಹೇಳಬೇಕಾದರೆ ನನಗೆ ಇವಳನ್ನು ನೋಡುವ

ಧೈರ್ಯ ವಾಗುತ್ತಿದ್ದಿಲ್ಲ. ಇವಳು ನನ್ನಂಥವರನ್ನು ಕಣ್ಣೆಟ್ಟು ಎಂದೂ ನೋಡುತ್ತಿದ್ದಿಲ್ಲ. ಆದರೆ ಇದೆಲ್ಲ ಈಗೆಲ್ಲಿ? ಸಿಕ್ಕರೆ! ಗಜರಾ, ನೀನೊಬ್ಬಳೇ ನನ್ನ ಕೈಗೆ ಸಿಗುವಿ! ಆ ಮೇಲೆ ಏನು ಮಾಡುವಿ? ನನ್ನಂತೆ ನಡಿಯಲಿಕ್ಕೇ ಬೇಕು. ( ಮೀಶೀ ಹುರಿ ಮಾಡುತ್ತಾನೆ ).

( ತೆರೆಯಲ್ಲಿ )

ಹೀರಾ ಎಲ್ಲಿ ಹೋಗುತ್ತೀ? ನದಿಗೆ ಒಗೆಯಲಿಕ್ಕೆ ಹೋಗುವಿಯೇನು? ನಿಲ್ಲು ನಾನೂ ಬಂದೆ; ಕೃಷ್ಣಿ ಒಂದು ಬರುತ್ತೇನೆಂತಿತ್ತು! ಬೇಗ ಕರ ಕೊಂಡು ಬಾ

ಮನೋಹರ—ಈ ಹೆಂಗಸರು ನದಿಗೆ ಒಗೆಯಲಿಕ್ಕೆ ಹೋಗುತ್ತಿರುವರು. ಇದರೊಳಗೆ ಹೀರೆಯೂ ಇರುವಳು. ಅವಳಿಗೆ ಗಜರೆಯು ಎಲ್ಲಿರುವಳೋ ಗೊತ್ತಿರಲಿಕ್ಕೆ ಬೇಕು. ಠಕ್ಕ ರಂಡಿ ಯಾರಿಗೂ ಹೇಳಿಲ್ಲ. ಒಳ್ಳೇದು. ನಾಲ್ಕು ಮಂದಿಯು ಕೂಡ ಮಾತಾಡಹತ್ತಿದಾಗ, ಮುಚ್ಚಿಟ್ಟ ಮಾತುಗಳು ತಮ್ಮಿಂದ ತಾವಾಗಿಯೇ ಹೊರಬೀಳುವವು. ಆದ್ದರಿಂದ ಇವರಿಗೆ ತಿಳಿಯದ ಹಾಗೆ ಬೆನ್ನುಹತ್ತಿ ಹೋಗಿ ಏನೇನು ಮಾತಾಡುವರೋ ಕೇಳಿಕೊಳ್ಳುತ್ತೇನೆ.

( ಹೋಗುತ್ತಾನೆ ).

---

## ೩ನೇ ಪ್ರವೇಶ.

ಸ್ಥಳ—ನದೀತೀರ.

( ಮೂವರು ಹೆಂಗಸರೂ ಹೀರೆಯೂ ಒಗೆಯುತ್ತಿರುತ್ತಾರೆ).

ಮನೋಹರ—( ಒಳಗೆ ಬಂದು ) ಒಳ್ಳೇದು, ಈ ಗಿಡದ ಮರೆಗೆ ಕುಳಿತು, ಏನೇನು ಮಾತಾಡುವರೋ ಕೇಳಿಕೊಳ್ಳುತ್ತೇನೆ.

( ಗಿಡದ ಮರೆಗೆ ಕುಳಿತುಕೊಳ್ಳುತ್ತಾನೆ ).

ಹೀರಾ—( ಮನೋಹರನನ್ನು ನೋಡಿ ತನ್ನಷ್ಟಕ್ಕೆ) ಅಯ್ಯ! ಈ ಅರಿಷ್ಟ ಇಲ್ಲೇ ಬಂದಿರುವದಲ್ಲ!

ರಂಗೂ—( ಹೀರೆಗೆ ) ಅಯ್ಯ! ನೀನು ಶೂದ್ರಳು; ನಿನ್ನ ನೀರು ಸಿಡಿಸಿಕೆಳ್ಳೋಣೇನು? ಸರಿ ಅತ್ತತ್ತು.

( ಹೀರೆಯು ದೂರ ಸರಿಯುತ್ತಾಳೆ ).

ಗಂಗೂ—ಇವಳ ಯಜಮಾನಿ ಗಜರೆಯಿದ್ದಳಲ್ಲ; ಆಕೆ ಇರುವ ತನಕಾ, ಈಕೆಯಕೈಯಿಂದ ಚಹಾ ಕುಡಿಯುತ್ತಿದ್ದಳಂತೆ. ನಿನಗೆ ಈಕೆಯ ನೀರು ಸಿಡಿದರೆ ವೈಲಿಗೆಯೇನು?

ಕೃಷ್ಣಾ--ಆಕೆಯು ಕಲಿತವಳವ್ವಾ ಸುಧಾರಕಳು ಹೇಗೆಮಾಡಿದರೂ ಛಂದ!

ಗಂಗೂ--ಅಯ್ಯ! ಕಲಿಯುವದೆಂದರೆ ಮಡಿ ಮೈಲಿಗಿ ಬಿಡುವದರಲ್ಲಿಯೇ ಅದೆ ಏನು?

ರಂಗೂ--ಮತ್ತೇನೆಂದು ತಿಳಿದಿ. ಹೆಣ್ಣುಮಕ್ಕಳು ಕಲಿಯಬೇಕಾದರೆ, ಬಲು, ಸುಲಭ. ನಮ್ಮ ಹುಡುಗರಿಗೆ ಮುಂಬಯಿಯಲ್ಲಿ ಕಲಿಸಬೇಕಾದರೆ, ಬೊಗಬೊಗಸೆ ರುಪಾಯಿ ಸುರುವಬೇಕಾಗುವದು. ಆದರೆ ಹೆಣ್ಣುಹುಡಗಿಯರು ಕಲಿಯಬೇಕಾದರೆ ಒಂದು ಪೈ ಸುದ್ಧಾ ಖರ್ಚು ಇಲ್ಲ.

ಕೃಷ್ಣಾ--ಅದು ಹ್ಯಾಗೇ ರಂಗೂ? ಅಷ್ಟು ಸ್ವಲ್ಪ ಖರ್ಚಿನಿಂದ ಎಲ್ಲಿ ಕಲಿಸುತ್ತಾರೆ ಹೇಳು, ನಾಸೂ ನನ್ನ ಮಗಳನ್ನಾದರೂ ಕಳಿಸುವೆನು.

ರಂಗೂ--ಅದೇನು? ಎಲ್ಲಿ ಬೇಕಾದಲ್ಲಿ ಕಲಿಯಲಿಕ್ಕೆ ಬರುತ್ತದೆ.

ಕೃಷ್ಣಾ--ಅದು ಹೇಗೆ?

ರಂಗೂ--ಮಡಿ ಮೈಲಿಗಿ, ದೇವರುದಿಂಡರು, ಜಾತಿ ಕಾಲ ನಾಚಿಕೆ ಲಜ್ಜಾ, ನಯ ಭಯ, ಇವೆಲ್ಲ ಬಿಟ್ಟರೆ, ತೀರಿತು! ಕಲಿತಂತಾಯಿತು, ಸುಧಾರಣೆಯಾಯಿತು; ಎಲ್ಲಾ ಆಯಿತು.

(ಎಲ್ಲರು ನಗುತ್ತಾರೆ.)

ಗಂಗೂ-ಹೌದು ನೋಡೇರಂಗು; ನೀನು ಹೇಳಿದ ಹಾಗೆ ಮಡಿಮೈಲಿಗೆಯನ್ನನಕಾ, ಆ ಗಜರಾ ಎಂದೇ ಬಿಟ್ಟುಬಿಟ್ಟಿದ್ದಳು. ನಾಚಿಕೆ ಸುದ್ಧಾ ಏಳ್ಳುಕಾಳಷ್ಟು ಇದ್ದಿದ್ದಿಲ್ಲ ನೋಡು. ಎಲ್ಲಿಬೇಕಾದಲ್ಲಿ ಎದೆ ಸೆಟಸಿಕೊಂಡು ಹಾಗೇ ನಡೆಯುತ್ತಿದ್ದಳು. ಯಾವ ಬೇಕಾದವನ ಕೂಡ ಹೆದರಿಕೆಯಿಲ್ಲದೆ ಮಾತಾಡುತ್ತಿದ್ದಳು.

ರಂಗೂ—ಅಯ್ಯ! ನಮ್ಮವ್ವಾ ಆಕೆಗೆ ಗಂಡಸರ ಕೂಡ ಮಾತಾಡಲಿಕ್ಕೆ ಹೇಗೆ ನಾಚಿಕೆ ಬರುತ್ತಿದ್ದಿಲ್ಲವೊ ಏನೋ ತಾಯಿ! (ನಾ ಇಂದಿಗೆ ನಾಲ್ಕು ಮಕ್ಕಳ ತಾಯಿಯಾದೆ. ನಮ್ಮ ಮನೆಯವರ ಕೂಡ ಮಾತಾಡಲಿಕ್ಕೆ ನಾಚಿಕೆ ಬರುತ್ತದೆ. (ಮೂಗುಮುರಿಯುತ್ತಾಳೆ.)

ಗಂಗೂ--ಅಯ್ಯ! ಮನೆಯುವರನ್ನಂತೂ ಬಿಡು. ನಿನಗಿಂತ ಹಿರಿಯಳು ನಾನು ಇಂದಿಗೆ, ನಮ್ಮಪ್ಪ ನಾಲ್ಕುಮಂದಿಯೊಳಗೆ ಕೂತಿದ್ದ ಅಂದರೆ, ನಾ ಅಲ್ಲೆ ಹಾಯುವದಿಲ್ಲ ಸುದ್ಧಾ! ನಮ್ಮ ಸಾವಿತ್ರಿ ಅದ ಅಲ್ಲ? ಅದೂ ಸುದ್ಧಾ ಹೋಗುವದಿಲ್ಲ.

ಕೃಷ್ಣಾ--ರಂಗೂಬಾಯಿ, ಅಲ್ಲ, ಈಗ ಗಜರಾನ ಸುದ್ದಿ ಏನು?

ರಂಗೂ--ಸತ್ತಳಂತಲ್ಲ! ಹಂಪಿಗೆ ಹೋದಾಗ.

ಕೃಷ್ಣಾ--ಪಾಪ! ಮುದುಕೆಯಾದ ತಾಯಿಗೆ ಬಹಳದುಃಖವಾಯಿತು.

ಗಂಗೂ—ರಂಗೂ ಇನ್ನೊಂದು ಸುದ್ದಿ ಕೇಳಿರುವಿಯೇನು?

ರಂಗೂ—ಏನು?

ಗಂಗೂ—ಗಜರಾ ಇನ್ನೂ ಜೀವದಿಂದ ಇದ್ದಾಳಂತೆ

ರಂಗೂ—ಛೀ! ಹಂಪಿಯಲ್ಲಿಯೇ ಸತ್ತು ಬಹಳ ದಿವಸಗಳಾದವು.

ಗಂಗೂ—ಛೀ! ಬಿಡು! ನಿನ್ನ ಹುಚ್ಚು ಹಾಳಾಗಲಿ! ಹಂಪಿಯೊಳಗೆ ಸತ್ತವಳು ಗಜರಾ ಅಲ್ಲವಂತೆ. ಹಂಪಿಗೆ ಹೋಗಿ ಬಂದವರು ಹೇಳುವರು. ಅಲ್ಲಿ ಸತ್ತವಳು ಬ್ರಾಹ್ಮಣ ಹೆಣ್ಣು ಮಗಳೇ ಅಲ್ಲವಂತೆ! ಹೀಗೆ ಅಲ್ಲಿ ಸುದ್ದಿ ಇರುವದಂತೆ!

ಕೃಷ್ಣಾ— ಹಾಗಾದರೆ ಗಜರೆಯು ಎಲ್ಲಿರಬಹುದು?

ಗಂಗೂ—ಕೃಷ್ಣಾ, ಹೀರೆಯನ್ನು ಕೇಳು ಆಕೆಗೆ ಗೊತ್ತಿದ್ದೀತು.

ಕೃಷ್ಣಾ—ಹೀರಾ, ನಿಮ್ಮ ಬಾಯುವರು ಎಲ್ಲಿರುವರೇ?

ಹೀರಾ—ನನಗೆ ಗೊತ್ತಿಲ್ಲರೆವ್ವಾ.

ರಂಗೂ—ಆಕೆ ಹೆಚ್ಚಿನಾಕಿ, ವಳಿತಾಗಿ ಹೇಳಿಯಾಳು.

ಗಂಗೂ—ಹಾಗಾದರೆ ಎಲ್ಲಿ ಹೋಗಿರಬಹುದೆ? ವಸಂತರಾಯನ ಮನೆಯಲ್ಲಿಯಂತೂ ಇಲ್ಲ.

ಕೃಷ್ಣಾ—ಇದ್ದರೆ, ಎಲ್ಲಿಯಾದರೂ ಆಪ್ತ ಇಷ್ಟರ ಮನೆಯಲ್ಲಿ ಇರಬಹುದು.

ಗಂಗೂ--ಅಯ್ಯ, ಆಕೆ ಸುಧಾರಿಸಿದವಳು, ನಿನ್ನಹಾಗೆ ಅಂಜಬುರಕಿಯೇನು? ಗಂಡನ ಕೂಡ ಜಗಳಾಡಿ ಎಲ್ಲಿಯಾದರೂ ಹೋಗಿ ಒಬ್ಬಾಕಿಯೇ ಇದ್ದರೂ ಇರಬಹುದು. ಆಪ್ತಇಷ್ಟರು ಯಾಕೆ ಬೇಕು ಆಕೆಗೆ?

ರಂಗೂ—ಒಬ್ಬಾಕಿಯೇನಿರುತ್ತಾಳೆ. ಸುಧಾರಣೆ ಸುಧಾರಣೆಯೆಂದು ಹೇಳಿ ಥೈ ಥೈ ಥೈ ಥೈ ಕುಣಿದಳು ಇಲ್ಲಿ. ಈಗ ನೋಡು ಸುಧಾರಣೆಯಾಯಿತು! ಅಂಥಾಕಿಗೇನು? ಎಲ್ಲಿ ಹೋದಲ್ಲಿ ಆಪ್ತರೇ!

ಕೃಷ್ಣಾ—ಛೀ ಬಿಡ! ಗೊತ್ತಿಲ್ಲದೆ ಯಾಕೆ ಒಬ್ಬರಿಗೆ ಹೆಸರಿಡುತ್ತೀ.

ಗಂಗೂ—ನೀ ಅಂತು ಹುಚ್ಚಿ ಖೋಡಿ, ಹಿಂದೂ ಗೊತ್ತಿಲ್ಲ ಮುಂದೂ ಗೊತ್ತಿಲ್ಲ. ಇಲ್ಲಿ ಇದ್ದಾಗ ಅಷರಂತ ಹಿಂಡು ಗಂಡಸರೊಳಗೆ ಇರುತ್ತಿದ್ದಳು. ನೋಡು ಅದೇನು ಚಹಾ ಕುಡಿಯುವದು! ಏನು ಕೈಗೆ ಕೈ ಹಿಡಿದುಕೊಂಡು ಅಡ್ಡಾಡಲಿಕ್ಕೆ ಹೋಗುವದು! ಏನು! ಕಿ ಕಿ ಕಿ ಕಿ ನಗುವದು! ಹೇಳುವ ಹಾಗಿಲ್ಲ. ಅಷ್ಟು ಮಂದಿಯೊಳಗೆ ಹಾಗೆಲ್ಲ ಮಾಡಿದಳು. ಈಗ ಯಾವನಾರೇ ಕರಕೊಂಡು ಹೋಗಿದ್ದಾನು.

ಕೃಷ್ಣಾ—ಹೀಗೆ ಇರಲಿಕ್ಕಿಲ್ಲ. ಸುಮ್ಮನೇ ಹಾಗೆ ಅನ್ನಬೇಡ. ಆಕೆ ಸತ್ತದ್ದೇ ಖರೆ, ಇಲ್ಲದಿದ್ದರೆ ಆಕೆಯ ಗಂಡನು ಮತ್ತೆ ಮದುವೆಯಾಗಬೇಕೆಂದು ಯಾಕೆ ಓಡಾಡುತ್ತಿದ್ದನು ?

ಗಂಗೂ—ಅವನಾದರೂ ಏನು ಸಾಲಸುದ್ದೆಂದು ತಿಳದೀ. ಉಡಾಳನ ಹಾಗೆ ಉರೂರು ತಿರುಗುತ್ತಾನೆ. ಒಂದು ಕೆಲಸ ವಿಲ್ಲ ಬೊಗಸೆಯಿಲ್ಲ. ಹಿರಿಯರು ಮಾಡಿಟ್ಟ ದುಡ್ಡನಷ್ಟು ಹಾಳು ಮಾಡುತ್ತಾನೆ. ಯಾವಾಗಲೂ ಕೆಟ್ಟ ಸಹವಾಸದಲ್ಲಿ ಇರುತ್ತಾನೆ.

ಕೃಷ್ಣಾ—ನಾ ಆನಕಾ ಕೇಳೇನಿ, ಗುಣಾ ಹೇಗೇ ಇರಲಿ. ರೊಕ್ಕ ಇದ್ದವ. ಕಂಡಾಬಟ್ಟಿ ವರದಕ್ಷಿಣೆ ಬಂದೀತು ಅಂತಿದ್ದರು.

ಗಂಗೂ—ಯಾರು ಕೊಡುತ್ತಾರೆ! ಬಂದ ಹೆಣ್ಣುಗಳೆಲ್ಲ ತಿರುತಿರುಗಿ ಹೋಗಲಿಕ್ಕೆ ಹತ್ತಿರುತ್ತವೆ. ಸ್ವಲ್ಪ ದಿವಸಗಳೊಳಗೆ ತಾನೇ ಮನೆಮನೆಗೆ ಹೋಗಿ ಕೇಳಿ ಎಲ್ಲಿಯದಾರೇ, ಒಂದು ಮಾರಿಗೆಯ ಹೆಣ್ಣು ಮಾಡಿಕೊಳ್ಳಬೇಕಾಗುವದು. ಮದುವೆಯಾಗದ ಮಾಡತಾನೇನು? ಬರೇ ರೊಕ್ಕಿದ್ದರಾಯಿತೇನು ? ರೊಕ್ಕ ಬೇಕು, ದಿಕ್ಕು ಬೇಕು.

ರಂಗೂ--ಅಯ್ಯಾ ! ಅದೂ ಪ್ರಸಂಗವು ಬಂದದೆ; ಕೇಳಿಲ್ಲೇನು ?

ಗಂಗೂ--ಏನು?

ರಂಗೂ--ವಸಂತರಾಯನು ತಾನೇ ಸ್ವತಃ ಹೋಗಿ ರಮಾಬಾಯಿಯನ್ನು ಕೇಳಿದನಂತೆ ‘ ನಿನ್ನ ಮಗಳನ್ನು ನನಗೆ ಮದುವೆಮಾಡಿ ಕೊಡುತ್ತೀಯೇನು?’ ಎಂದು. ಮೊದಲು ಹೂಂ ಅಂದಳಂತೆ.

ಗಂಗೂ– ಆಕೆ ಮಾತ್ರ ಕೊಟ್ಟರೆ ಕೊಟ್ಟಾಳು ನೋಡು, ವಸಂತರಾಯನಿಗೆ ತನ್ನ ಮಗಳನ್ನು ; ಯಾಕಂದರೆ, ಆಕೆಯು ಸ್ವಲ್ಪ ಸ್ವಲ್ಪ ಅದೇ ಜಾತಿಯವಳೇ. ಎಷ್ಟು ದಿವಸವಾದರೂ ಮಗಳ ಮದುವೆಯನ್ನು ಬಿಟ್ಟುಬಿಟ್ಟಳು. ಅವಂತಿನ್ನ ನೋಡೀದಿಲ್ಲೊ ? ಹುಡಿಗೇ ಅದು ? ಎರಡು ಮಕ್ಕಳ ತಾಯಿಯ ಹಾಗೆ ಕಾಣಿಸುತ್ತಾಳೆ.

ರಂಗೂ--ಕೇಳ! ಮುಂದೆ ನನ್ನ ಮಾತನ್ನಂತು ಕೇಳು.

ಕೃಷ್ಣಾ--ಅದೇ ಜಾತಿಯವಳೆಂದರೆ ಯಾವ ಜಾತಿಯವಳು ?

ಗಂಗೂ--ಅವಳೂ ಸುಧಾರಕಳು.

ಕೃಷ್ಣಾ--ಸುಧಾರಕರೆಂದರೆ ಹೆಂಣು ಗಂಡಾಗುವದಿಲ್ಲೇನು ?

ಗಂಗೂ--ರಂಗೂ, ನಿನ್ನ ಕಥೆ ಹೇಳು, ಮುಂದೆ ಏನಾಯತು? ಅದರ ಮಾತು ತಕ್ಕೊಂಡು ಏನುಮಾಡುತ್ತಿ ?

ರಂಗೂ--ಮೊದಲು ರಮಾಬಾಯಿಯು ಹುಂ ಅಂದಳಂತೆ, ಮುಂದೆ ಆಕೆಯ ಮಗಾ ಬಂದು, ಕಲ್ಲು ಹಾಕಿದನಂತೆ.

ಕೃಷ್ಣಾ--ಮುಂದೇನಾಯಿತು?

ರಂಗೂ--ಮುಂದೇನಾಗುವದು! ಮದುವೆಯು ಮುರಿದು ಹೋಯಿತು

ಗಂಗೂ--ಆಕೆಯ ಮಗನದೇನು ಗಂಟುಹೋಗುತ್ತಿತ್ತೋ ? ತಂಗಿ ಇನ್ನೂ ಸಣ್ಣಾಕಿ ಕಾಣಸತಾಳ.!

ರಂಗೂ—ಯಾಕೆ ಮುರಿದನೋ ಏನೋ ? ನನಗೂ ಪೂರಾ ಗೊತ್ತಿಲ್ಲ ಆದರೆ ಇಷ್ಟು ಮಾತ್ರ ತಿಳಿಯಿತು.

ಕೃಷ್ಣಾ—ಏನು ತಿಳಿಯಿತು ?

ರಂಗೂ--ನಿನ್ನೆ ಅವಂತಿಕೆಯು ನಮ್ಮ ಮನೆಗೆ ಅರಿಸಿಣ ಕುಂಕುಮ ಕ್ಕೆಂದು ಬಂದಿದ್ದಳು. ಅವಳನ್ನು ನಾನು ಕೇಳಿದೆನು. "ನಿನ್ನ ಮದುವೆಯು ಯಾಕೆ ಮುರಿಯಿತೆಂದು". ಅವಳು ಮೊದಲು ಮೊದಲು ಏನೂ ಹೇಳಲಿಲ್ಲ. ಒಬ್ಬಳನ್ನೇ ಕರೆದು ಜುಲುಮೆ ಮಾಡಿದಾಗ, ವಸಂತರಾಯಗ ಕೊಟ್ಟರೆ ನಾನು ಯಾವಳಿಗೋ ಒಬ್ಬಳಿಗೆ ಸವತಿಯಾಗಬೇಕಾಗುವದಂತೆ. ಆದ್ದರಿಂದ ಅಂಣನು ಮದುವೆಯನ್ನು ಮುರಿದನು." ಹೀಗೆಂಬು ಹೇಳಿದಳು.

ಗಂಗೂ--ಏಸಿದ್ದರೂ ಇರಬಹುದು ಅವನ ಮದುವೆ ಮಾತ್ರ ಆಗವುದಿಲ್ಲ. ಯಾಕಂದರೆ ಆ ಹುಡುಗನು ಬಹಳ ಕೆಟ್ಟನು

ಕೃಷ್ಣಾ--ಆದೀತು ಪಶ್ಚಾತ್ತಾಪ, ಒಂದಿಲ್ಲೊಂದು ದಿನ. ದಿವಸಗಳು ಆದಹಾಗೆ ಬುದ್ಧಿ ಬಂದೀತು.

ಗಂಗೂ--ನಡಿಯವ್ವ ತಡವಾಯಿತು. ನಿನ್ನ ಮಾತಿನ ಸಲುವಾಗಿ ನನಗೆ ಒಗೆಯೋಣ ಸಹ ಆಗಲಿಲ್ಲ, ಹಾಗೇ ಹಿಂಡಿಬಿಡುವೆನು.

ರಂಗೂ—ಹೌದವ್ವಾ ಹೊತ್ತಾಯಿತು. ಹೋದಕೂಡಲೇ ಮನೆಯೊಳಗೆ ಆ ಮುದಿಗೂಗೆಯೊಂದು ಗದ್ದರಿಸುತ್ತದೆ; ಇನ್ನೂ-

ಗಂಗೂ– ನನಗೆ ಅದೊಂದು ತ್ರಾಸು ವಿಲ್ಲ ಮಹಾರಾಯಳೇ ! ಅತ್ತಿಮಾವ ಇಬ್ಬರನ್ನು ಸಣ್ಣವಳಿದ್ದಾಗಳೇ ನೀಗಿ ಕುಳಿತಿರುವೆನು. ದೇವರು, ಅದೊಂದು ದೊಡ್ಡ ಉಪಕಾರ ಮಾಡಿದನು ನನ್ನ ಮೇಲೆ. (ಗಂಗೂ, ರಂಗೂ, ಕೃಷ್ಣಾ ಮೂವರೂ ಹೋಗುತ್ತಾರೆ.)

ಹೀರಾ—( ಮುಂದಕ್ಕೆ ಬಂದು ತನ್ನಷ್ಟಕ್ಕೆ) ಅಯ್ಯೋ ಇವರಿಗೆ ಎಂದು ಬುದ್ಧಿ ಬರಬೇಕು ? ತಲೆಯಲ್ಲಿ ನರೆ ಹಾಯ್ದವು ; ನಾಲ್ಕು ಮಕ್ಕಳ ತಾಯಂದಿರಾದರು. ಇನ್ನೂ ಸಣ್ಣ ಹುಡುಗರಿಗೆ ಇರುವ ತಿಳಿವಳಿಕೆಯು ಇಲ್ಲವಲ್ಲ. ದೇವರು, ದಿಂಡರು, ಜಾತಿ, ಕುಲ, ನಾಚಿಕೆ, ಲಜ್ಜಾ ಇವೆಲ್ಲವುಗಳನ್ನು ಬಿಟ್ಟರೆ ಕಲಿತಂತಾಯಿತಂತೆ ಇಲ್ಲ ಅವ್ವಗಳಿರಾ, ಕೆಲಸ ಬೊಗಸೆಗಳನ್ನು ಬಿಟ್ಟು, ಗಂಡರ ಮಕ್ಕಳ ಚಿಂತೆಯಿಲ್ಲದೆ, ಮನೆಮನೆಗೆ ತಿರಿಗಿ ಸುದ್ದಿಗಳನ್ನು ತುಕೊಂಡು, ನಾಲ್ಕುಮಂದಿ ತಲೆಗೂಡಿಸಿ, ಅಲ್ಲದ ಸಲ್ಲದ ಹುಳುಕುಗಳನ್ನು ಎದ್ದೆಣಿಸುತ್ತಾ ಮಾತಾಡಿದರೆ, ಕಲಿತಂತಾಯಿತಲ್ಲವೇ ! ಕಲಿತ ಹೆಣ್ಣುಮಕ್ಕಳಿಗೆ ನಾಚಿಕೆಯಂತೂ ಎಳ್ಳು ಕಾಳಷ್ಟು ಇಲ್ಲವಂತೆ, ಹುಟ್ಟಾ ಹುಂಡರೊಳಗೆ ಓಡಾಡಿ ಕಂಡಕಂಡಲ್ಲೆ ಹರಟೆ ಕೊಚ್ಚುತ್ತಾ ಕೂಡ್ರುವ ನಿಮ್ಮಂತವರಿಗೆ ಮಾತ್ರ ಮಾನಮರ್ಯಾದೆಗಳು ಗೊತ್ತಿರುತ್ತವೆ. ಅವಂತಿಕೆಗೆ ಈಗ ಹದಿನಾರು ವರ್ಷ. ಈಗಾಗಲೇ ಎರಡು ಹಡೆದವಳ ಹಾಗೆ ಕಾಣುವಳಂತೆ. ಇವರು ಮಾತ್ರ ತೊಟ್ಟಿಲಕ್ಕೆ ಬಾಸಿಂಗವನ್ನು ಕಟ್ಟಿಸಿಕೊಂಡು ಮದುವೆ ಯಾದರು! ಅಯ್ಯೋ! ಎಂಥ ಮನಸ್ಸಿಗೆ ಹತ್ತುವಂಥಾ ಮಾತುಗಳು ! ಗಜರಾಬಾಯಿಯನ್ನು ಯಾರೋ ಸುಧಾರಿಸಿದರು. ಯಾರೋ ಕರಕೊಂಡು ಹೋಗಿದ್ದಾರು ಅಂದರೇನು ? ಅಯ್ಯೋ ! ನಮ್ಮ ಗಜರಾಬಾಯಿಯನ್ನು ಬಾಜಾರ ಬಸವಿಯನ್ನೆ ಮಾಡಿದರಲ್ಲ. ಮಂಗಗಳಿಗೆ ಮಾಣಿಕದ ಬೆಲೆ ಏನು? ಅಮ್ಮಾ ಗಜರಾಬಾಯಿಯೇ ನೀನು ಹೇಗೆ ಇದ್ದೀ ಅನ್ನುವದು, ದೇವರಿಗೇ ಗೊತ್ತು ನನಗೇ ಗೊತ್ತು. ಸಂಜೀವರಾಯನು ಅಂಥವನೇ ? ಗಜರಾಬಾಯಿಯು ಅಂಥವಳೇ ? ಆದರೆ ಎರಡೂ ತಿಳಿಯದೆ, ಮೊದಲು ಗಜರಾಬಾಯಿಯು ಜೀವದಿಂದಿರುವಳೋ ಇಲ್ಲವೋ ಎಂಬದನ್ನು ಕೂಡ ಚನ್ನಾಗಿ ಅರಿಯದೆ ಸುಮ್ಮಸುಮ್ಮನೆ ಹೊತ್ತುಗಳೆಯಬೇಕೆಂದು ಗರ್ತಿಯರನ್ನು ಹಳೆಯುವರಲ್ಲ. ಇಂಥವರಿಗೆ ಏನನ್ನಬೇಕು. (ವಿಚಾರಿಸಿ) ಎರಡನೇದೇನು ಉಪಾಯ ? ಏನಾದರೂ ಮಾಡಿ ಗಂಡ ಹೆಂಡಂದಿರಿಬ್ಬರನ್ನು ಕೂಡಿಸಿ ಸುಖದಿಂದಿರುವಂತೆ ಮಾಡಬೇಕು. ವಸಂತರಾಯರಿಗೂ ಈಗೀಗ ತಲೆಗೆ ಬಡದಂತಾಗಿದೆ. ಆಗದೇನು ಮಾಡೀತು ? ಮೇಲಾಗಿ ವಸಂತರಾಯರಿಗೆ ಬುದ್ಧಿ ಬರಲಿಕ್ಕೆ ಎಷ್ಟೋ ಕಾರಣಗಳಾದವು. ಗಜರಾಬಾಯಿಯನ್ನಂತು ಕಳೆದುಕೊಂಡರು.

ಪುಲಿಕೆಯನ್ನು ಸಿಟ್ಟಿನ ಭರದಲ್ಲಿ ಕೊಂದು ಹಾಕಿದರು. ಎರಡನೇ ಮದುವೆಯಂತೂ ಆಗಲಿಲ್ಲ. ಇಷ್ಟಾಗಿ ಊರೊಳಗಿನ ಜನರೆಲ್ಲ ಕೆಟ್ಟ ಸಂಗತಿಗೆ ಬಿದ್ದನೆಂದು ಹಳಿಯುವರು. ಅಂತೇ ಎಲ್ಲಿಯೂ ಹೊರಬೀಳದೆ ಗಜರಾಬಾಯಿಯ ಭಾವಚಿತ್ರವನ್ನು ಮುಂದಿಟ್ಟುಕೊಂಡು ಸಂಣ ಮೋರೆಮಾಡಿ ಎವೆ ಇಕ್ಕದೇ ನೋಡುತ್ತ ಮನೆಯಲ್ಲೇ ಕುಳಿತು ಕೊಳ್ಳುವರು. ನಾಳೆಗೇ ನಾನು ಅವರ ಮನೆಗೆ ಹೋದಾಗ ಆಶೆಯನ್ನು ಹುಟ್ಟಿಸುವ ಮಾತುಗಳನ್ನು ಹೇಳಿ ಅವರಿಗೆ ಸಮಾಧಾನ ಮಾಡುವೆನು. ಮುಂದ ಏನಾದರೂ ಯುಕ್ತಿಯಿಂದ ಅಗಲಿದ ಗಂಡಹೆಂಡಂದಿರಿಬ್ಬರನ್ನೂ ಕೂಡಿಸೋಣ. (ಹೋಗುತ್ತಾಳೆ.)

ಮನೋಹರ—(ಒಮ್ಮೆಲೆ ಒಳಗೆ ಜಿಗಿದು) ಹಾಂ ಎಳೆಸಿಕ್ಕಿತು. ಇನ್ನೇನು ತಡ ನನ್ನ ಕೆಲಸವಾಗಲಿಕ್ಕೆ! ಏ ಹೀರೀ! ಹೀರೀ! ಏ ಖೈ ಹೀರೀ! ನೋಡಿರಿ ಎಷ್ಟು ಸೊಕ್ಕು ನನ್ನ ಕಡೆಗೆ ತಿರುಗಿ ನೋಡುವದಿಲ್ಲ ಸಹ ಆದರೆ ಏ ಖೈ ಹೀರೀ ನಿನ್ನ ಈ ಸೊಕ್ಕನ್ನೆಲ್ಲ ಸ್ವಲ್ಪ ದಿವಸಗಳಲ್ಲಿಯೇ ಮುರಿಯುವೆನು. ಗಜರಿಯೇ ನನ್ನ ಕೈಗೆ ಸಿಕ್ಕಮೇಲೆ ನಿನ್ನದೇನು? ಆದರೆ ಗಜರೆಯು ಈಗ ಎಲ್ಲಿ ಇರಲಿಕ್ಕೆ ಬೇಕು. ಸಂಜೀವನು ತನ್ನ ತಂಗಿಗೆ "ನಿನ್ನ ಮದುವೆಯು ವಸಂತನ ಕೂಡ ಆದರೆ ನೀನು ಒಬ್ಬಳಿಗೆ ಸವತಿಯಾಗಬೇಕಾಗುವದು ಎಂದನಂತೆ. ಅಂದಮೇಲೆ ಸಂಜೀವನಿಗೆ ಗಜರೆಯು ಜೀವದಿಂದಿದ್ದದ್ದು ಗೊತ್ತಿರಲಿಕ್ಕೆ ಬೇಕು. ನಾವು ಹಂಪಿಯಿಂದ ಬರುವದರೊಳಗೆ ಇವನು ಅಲ್ಹಾಬಾದಕ್ಕೆ ಕೆಲಸದ ಮೇಲೆ ಹೋಗಿದ್ದನು. ಈ ಊರಲ್ಲಿಯ ಸುದ್ದಿಯಂತೂ ಇವನ ಕಿವಿಗೆ ಬೀಳುವಹಾಗಿಲ್ಲ. ಇಲ್ಲಿಯ ಹಾರಸುದ್ದಿಯನ್ನಂತು ಅಷ್ಟು ದೂರವಯ್ಯುವವರು ಯಾರೂ ಇಲ್ಲ. ಅಂದಮೇಲೆ ಇವನಿಗೆ ಎಲ್ಲಿಂದ ತಿಳಿದಿರಬಹುದು? ಹಾಂ! ಗಜರೆಯು ಜೀವದಿಂದ ಇದ್ದದ್ದು ನಿಜವಾದರೆ ಅವಳು ಅಲ್ಹಾಬಾದದಲ್ಲಿಯೇ ಇರಲಿಕ್ಕೆ ಬೇಕು. ಇಲ್ಲದಿದ್ದರೆ ಬೇರೆ ಯಾವ ರೀತಿಯಿಂದ ಈ ಸುದ್ದಿಯು ಅವನಿಗೆ ತಿಳಿದಿದ್ದೀತು. ಹಾಂ! ಗಜರಾ ಸಿಕ್ಕಿ. ನೀನೆಲ್ಲಿರುವಿಯೋ ಗೊತ್ತಾಯಿತು. ಇನ್ನೇನು ತಡ ನನ್ನ ಕೆಲಸವಾಗಲಿಕ್ಕೆ. ಈ ಹೊತ್ತೇ ವಸಂತರಾಯನು ಸತ್ತುಹೋದನೆಂದು ನಿನಗೆ ಪತ್ರ ಬರೆಯುವೆನು. ಅಂದರೆ ಸುಧಾರಕಳಾದ ನಿನಗೆ ಪುನರ್ವಿವಾಹ ಮಾಡಿಕೊಳ್ಳಲಿಕ್ಕೆ ಮಾರ್ಗವಾಯಿತು. ಆ ಮೇಲೆ ತುಸು ದಿವಸಗಳಲ್ಲಿ ನೀನು ನನ್ನವಳೇ. ವಸಂತರಾಯನ ಮರಣದ ದುಃಖವು ಮರೆಯಲಿಕ್ಕೆ ಕೆಲವು ಕಾಲವು ಹೋಗಲಿ. ಆ ಮೇಲೆ ಒಂದರ ಮೇಲೊಂದು ಪ್ರೇಮ ಲೇಖನಗಳನ್ನು ಬರೆದು ಕಡೆಗೆ ನಾನೇ ಸ್ವತಃ ಪ್ರಯಾಗಕ್ಕೆ ಹೋಗಿ ನಿನ್ನ ಕೈ ಹಿಡಿಯುವೆನು. ಓಹೋ, ಸೇಡು ತೀರಿದಂತಾಯಿತು. ವಸಂತನ ಸೇಡು ತೀರಿದಂತಾಯಿತು. (ಹೋಗುತ್ತಾನೆ.)

## ೪ನೇ ಪ್ರವೇಶ.

( ಸ್ಥಳ:—ವಸಂತರಾಯನ ಮನೆ. )

ವಸಂತರಾಯನು ಚಿಂತಾಗ್ರಸ್ತನಾಗಿ ಕುಳಿತಿರುವನು.

ವಸಂತ—(ತನ್ನಷ್ಟಕ್ಕೆ) ಅಯ್ಯೋ! ಎಂಥ ಪ್ರಮಾದವು. ದೊಡ್ಡ ಪ್ರಮಾದವು! ನನ್ನಿಂದ ಎಂದೂ ತಿದ್ದಲಿಕ್ಕೆ ಬಾರದಂಥ ಪ್ರಮಾದವಾಯಿತಲ್ಲ? ಇದಕ್ಕೇನು ಪ್ರಮಾದವೆನ್ನಬೇಕೋ, ಅವಿವೇಕವೆನ್ನಬೇಕೋ, ಉನ್ಮಾದವೆನ್ನಬೇಕೋ ತಿಳಿಯದು ಆ ಕಾಲದ ನೆನಪಾದರೆ, ಒಮ್ಮಿಂದೊಮ್ಮೆಲೇ ಎದೆಯಲ್ಲಿ ಕೆಂಡವನ್ನು ಕುಕ್ಕಿದಂತಾಗುತ್ತದೆ. ನನ್ನ ಕಡೆಯಿಂದ ಅಂಥ ಘಾತಕತನದ ಕೆಲಸವಾದರೂ ಹ್ಯಾಗಾಗಿದ್ದೀತು. ನೆನಸಿದರೆ ಮೈಮೇಲೆ ಮುಳ್ಳು ಬರುತ್ತದೆ. ( ವಿಚಾರಿಸಿ) ಗಜರೆಯು ನುಡಿಯುತ್ತಿದ್ದ ಒಂದು ಸವಿಮಾತಾದರೂ ನನ್ನ ಸ್ಮರಣೆಗೆ ಬಂದಿದ್ದರೆ, ಸಾಕಾಗಿತ್ತು. ಅವಳನ್ನು ನಾನು ಗುಹೆಯಲ್ಲಿ ಚಲ್ಲಿಕೊಟ್ಟು ಬರುತ್ತಿದ್ದಿಲ್ಲ. ಗಜರಾ, ಗಜರಾ, ಎಲ್ಲಿ ಹೋದಿ! (ಅಳುತ್ತಾನೆ) ಗಜರಾ, ಈಗ ನನಗೆ ಎಂಥ ಹುಚ್ಚು ಹಿಡಿದಿರುವದು? ನಾನೇ ನಿನ್ನನ್ನು ಪರಲೋಕಕ್ಕೆ ಕಳುಹಿಸಿ, ಪುನಃ ನಾನೇ 'ಎಲ್ಲಿಹೋದಿಯೆಂದು ಕೇಳುವೆನು. ಗಜರಾ, ನಾನೇ ನಿನ್ನನ್ನು ಕೊಂದೆನು. ಇದೇ ಯಮದೂತನು, ನಿನ್ನನ್ನು ಗುಹೆಗೆ ಎಳೆದೊಯ್ದನು. ಕೋಮಲಾಂಗಿ, ನಿನ್ನನ್ನು ಬರಿಗಾಲಿನಿಂದ ನಾನು ಎಂದೂ ನಡೆಯಗೊಡಲಿಲ್ಲ. ಅಂಥವನು ಮೈಗೆ ನಟ್ಟಾವೆಂಬ ಪರಿವೆಯಿಲ್ಲದೆ, ಕಲ್ಲು ಮುಳ್ಳುಗಳೊಳಗೆ, ನಿನ್ನನ್ನು ಹ್ಯಾಗೆ ಅಪ್ಪಳಿಸಿದೆನು? ಅಯ್ಯೋ ಇದು ಎಂಥ ಕ್ರೂರತನವು! ಕುರಿ ಕಡಿಯುವಾಗ ಕಟುಕನಿಗೂ ಕೂಡ ತುಸು ಕೈ ನಡುಗೀತು. ಆದರೆ ನಾನು ಮಾತ್ರ ನಿನ್ನನ್ನು ಮೃತ್ಯುವಿನ ಬಾಯಲ್ಲಿ ತುರುಕಿ, ಕಲ್ಲಿನ ಹಾಗೆ ಸ್ವಸ್ಥ ನೋಡುತ್ತ ಎದುರಿಗೆ ನಿಂತೆನಲ್ಲಾ? ಈ ಅನುತಾಪವೆಲ್ಲ ಆಗ ಹಾಗೆ ಮಾಡಿದ್ದರ ಫಲವು. ಅಯ್ಯೋ! ಇದನ್ನು ಏನು ಮಾಡಿ ಶಾಂತಿಗೊಳಿಸಲಿ! ( ವಿಚಾರಿಸುತ್ತಾನೆ).

ಹೀರಾ—( ಒಳಗೆ ಬಂದು ತನ್ನಷ್ಟಕ್ಕೆ) ಇಕೋ ಗಜರಾಬಾಯಿಯ ತಸಬೀರನ್ನು ಮುಂದಿಟ್ಟುಕೊಂಡು ಸಂತಾಪಗೊಳ್ಳುತ್ತಾ ಹ್ಯಾಗೆ ಅಳುತ್ತಿರುವರು? ನಿಜವಾಗಿ, ಇವರ ದುಃಖವನ್ನು ನೋಡಿ ನನಗೆ ಸಮಾಧಾನವಾಗುತ್ತದೆ.

ವಸಂತ—ಯಾರಲ್ಲಿ ?

ಹೀರಾ—ನಾನು ಮಹರಾಜ, ಹೀರೆಯು

ವಸಂತ—ಮನೆಯ ಕೆಲಸಬೊಗಸೆಯಲ್ಲಾ ಆಯಿತೇನು ?

ಹೀರಾ—ಆಯಿತು.

ವಸಂತ—ಹಾಗಾದರೆ ಇಂದು ಮನೆಗೆ ಹೋಗಬೇಡ. ಇಲ್ಲಿಯೇ ನನ್ನ ಹತ್ತರ ಕುಳಿತುಕೋ.

ಹೀರಾ—ಒಳ್ಳೇದು. (ತನ್ನಷ್ಟಕ್ಕೆ) ಈ ಹೊತ್ತು ದಿನಕ್ಕಿಂತ ಗಜರಾ ಬಾಯಿಯವರ, ಸ್ಮರಣೆಯು ವಿಶೇಷವಾದಂತೆ ತೋರುತ್ತದೆ.

ವಸಂತ—ಹೀರಾ, ನೋಡು ಈಗ ನನಗೆ ಬುದ್ಧಿ ಬಂದು, ಕೇವಲ ಪಶ್ಚಾತ್ತಾಪಕ್ಕೆ ಮಾತ್ರ ಕಾರಣವಾಯಿತು.

ಹಿರಾ—(ತನ್ನಷ್ಟಕ್ಕೆ) ಹಾಗಾದರೆ ಬುದ್ಧಿ ಬಂದದ್ದು ನಿಜವೇ? ಆಗಲಿ ಇನ್ನಷ್ಟು ಪಶ್ಚಾತ್ತಾಪವಾಗಲಿ.

ವಸಂತ—ಹೀರಾ, ಆದಸಂಗತಿಯನ್ನೆಲ್ಲ ನೀನು ನೋಡಿರುವಿ. ಗಜರೆಯನ್ನು ಹೊತ್ತುಕೊಂಡು ಹೋಗುವಾಗ ನೀನು ಯಾಕೆ ನನ್ನನ್ನು ತಡೆಯಲಿಲ್ಲ.

ಹಿರಾ—ನೀವು ಗುಹೆಯಲ್ಲಿ ಅವಳನ್ನು ಹುಗಿದು ಬರುವಿರೆಂದು ನನಗೆ ತಿಳಿಯಲಿಲ್ಲ.

ವಸಂತ—(ವಿಚಾರಿಸಿ)ಆದೆಲ್ಲವೂ ಈಗ ನೆನಪಾಗಿ, ಮೈಮೇಲೆ ಕೆಂಡಗಳು ಸುರಿದಂತೆ ನನಗೆ ಸಂತಾಪವಾಗುತ್ತಿರುವದು. (ಅಳುತ್ತ) ಹಿರಾ ನನ್ನನ್ನು ಕಾಪಾಡು.

ಹಿರಾ—ಛೀ! ಇದೇನು! ವಸಂತರಾಯರೇ ನಿಮ್ಮಂಥವರು ಹೀಗೆ ಅಳಬಾರದು.

ವಸಂತ—ಹಿರಾ, ಅಂದಿನ ಅವಳ ಶೋಚನೀಯ ಸ್ಥಿತಿಯನ್ನು ಸ್ಮರಿಸಿ, ಒಮ್ಮಿಂದೊಮ್ಮೆಲೇ ನನ್ನ ಕೈಕಾಲುಗಳು ಹೋಗುವವು. (ಬಿಕ್ಕಿ ಬಿಕ್ಕಿ ಅಳುತ್ತ) ಆಹೊತ್ತು ನಾನು ಗುಹೆಯೊಳಗೆ ಅವಳನ್ನು ಚಲ್ಲಲಿಕ್ಕೆ ಹೋದಾಗ ಮೂರ್ಛೆಯು ಇನ್ನೂ ಪೂರ್ಣವಾಗಿ ಹೋಗಿದ್ದಿಲ್ಲ; ಆಗ ನನ್ನ ಕೊರಳಿಗೆ ಅಟ್ಟಿ ಮುಟ್ಟಿ ಹಾಕಿದವಳು ಬೇಗನೆ ಬಿಡವೊಲ್ಲಳು. ಕಡೆಗೆ ನಾನು ಅವಳ ಕೈಕೊಸರಿ ಒಗೆದು, ಗುಹೆಯ ಬಾಯಿಗೆ ಕಲ್ಲು ಆನಿಸಿ ಬಂದೆನು. ಈಗ ಆ ಕಂಠಾಲಿಂಗನದ ಸ್ಮರಣೆಯು, ಕಾದ ಕಬ್ಬಿಣದ ಬರೆಕೊಟ್ಟಂತೆ ಆಗುವದು, (ಅಳುತ್ತಾನೆ.)

ಹಿರಾ—ಅಳಬೇಡಿರಿ ಹಾಗೇ ಹೇಳಿರಿ.

ವಸಂತ—ಅವಳನ್ನು ನಾನು ಮೊದಲು ನೋಡಿದಂದಿನಿಂದ ಆ ಘೋರವಾದ ಕೊಲೆಯವರೆಗೆ—(ಅಳುತ್ತಾನೆ.)

ಹೀರಾ:—(ತನ್ನಷ್ಟಕ್ಕೆ) ಇನ್ನೂ ಗಜರಾಬಾಯಿಯು ಸತ್ತಿಲ್ಲ. ಇರಲಿ.

ವಸಂತ:—ಅವಳ ಚರಿತ್ರವೆಲ್ಲವೂ ನನ್ನ ಕಣ್ಣುಮುಂದೆಕಟ್ಟಿರುವದು. ಅವಳು ನನ್ನಮೇಲೆ ಮಾಡುತ್ತಿದ್ದ ಪ್ರೀತಿಯೂ, ಅವಳ ನಡೆನುಡಿಗಳೂ. ಒಂದುಳಿಯದ ಹಾಗೆ, ಈಗ ನನಗೆ ಎಲ್ಲವೂ ನೆನಪಾಗುತ್ತವೆ.

ಹೀರಾ:—(ತನ್ನಷ್ಟಕ್ಕೆ) ಆಗ ವಿಜಯನಗರದಲ್ಲಿ ಯಾಕೆ ನೆನಪಾಗಲಿಲ್ಲ?

ವಸಂತ:—ಹೀರಾ, ಇದೇ ಅವಳು ಕೂಡ್ರುವಸ್ಥಳವು. ಊಟಉಡಿಗೆಗಳಾದಮೇಲೆ, ಇಲ್ಲಿ ಕುಳಿತು ಏನಾದರೂ ಓದಹತ್ತುವಳು. ನಾನು, ಅವಳ ಹತ್ತರವೇ ಕುಳಿತು ಕೇಳಹತ್ತುವೆನು. ಆವಳಿಗೆ ಸ್ವಭಾಷೆಯ ಪುಸ್ತಕಗಳ ಮೇಲೆ ಪ್ರೀತಿ ಬಹಳ. ಆದರೂ ಒಮ್ಮೊಮ್ಮೆ ಇಂಗ್ಲಿಷ, ಮಹಾರಾಷ್ಟ್ರ, ಬಂಗಾಲೀ, ಭಾಷೆಗಳೊಳಗಿನ ಕಥೆ ಕಾದಂಬರಿಗಳನ್ನು ಓದುತ್ತಿದ್ದಳು. ಈಗ ಒಮ್ಮೊಮ್ಮೆ ಈ ಕೋಣೆಯೊಳಗೆ ಕಾಲಿಟ್ಟಕೂಡಲೆ, ಅವಳ ಓದುವ ಧ್ವನಿಯೇ ಕೇಳಬಂದಂತಾಗುತ್ತದೆ.

ಹೀರಾ:—(ತನ್ನಷ್ಟಕ್ಕೆ) ವಿಜಯನಗರಕ್ಕೆ ಹೋಗುವಾಗ, ಅವಳು ನಾನೂ ಬರುವೆನೆಂದು ಕೂಗಿದ ಆರ್ತಸ್ವರವು ಯಾಕೆ ಕೇಳಬರಲಿಲ್ಲ?

ವಸಂತ:—ಹೀರಾ, ಇದು ಗಜರೆಯು ಹೆಣೆಯಲಿಕ್ಕೆ ಹತ್ತಿದ ಕೊರಳುಪಟ್ಟಿಯು. ಅರ್ಧವಾಗಿ ಇಲ್ಲಿಯೇ ಉಳಿದಿರುವದು. ಕನ್ನಡ ಕೋಕಿಲೆಗೆ ಕಳುಹಬೇಕೆಂದು ಬರೆಯಹತ್ತಿದ ಲೇಖವಿದು. ಹೀರಾ, ಇವಳ ಅಕ್ಷರಪಂಕ್ತಿಗಳು ಮುತ್ತಿನ ಸರಗಳಂತೆ ಹ್ಯಾಗೆ ಒಪ್ಪುತ್ತವೆ ನೋಡೇ! ಇಕೋ ಸುಮ್ಮನೆ ಕೂಡ್ರದೆ ಇಲ್ಲಿ ತನ್ನ ಹೆಸರನ್ನು ಬರೆದಿರುವಳು ನೋಡು. (ಓದುತ್ತಾನೆ) 'ವಸಂತರಾಯರ ಚರಣ ಸೇವಕಳಾದ ಗಜರಾ.' ಅಯ್ಯೋ! ಎತ್ತನೋಡಿದತ್ತ ಗಜರೆಯನ್ನು ನೆನಪಿಗೆ ತರುವ ವಸ್ತುಗಳೇ ಕಣ್ಣಿಗೆ ಬೀಳುವವಲ್ಲ! ಗಜರಾ, ನಿನ್ನನ್ನು ಹ್ಯಾಗೆ ಮರೆತೇನು. ಹ್ಯಾಗೆ ಪಶ್ಚಾತ್ತಾಪವನ್ನು ನೀಗುವೆನು!

ಹೀರಾ:—ವಸಂತರಾಯರೇ, ಇವೆಲ್ಲವೂ ನನಗೆ ಆಶ್ಚರ್ಯಕಾಣುತ್ತವೆ. ಅವಳ ಮೇಲಿದ್ದ ಇಷ್ಟು ಪ್ರೀತಿಯು ವಿಜಯನಗರದಲ್ಲಿ ಎಲ್ಲಿ ಹೋಯಿತು? ಮೊದಲು ಹೊರಡುವಾಗಲೇ ಬರಬೇಡೆಂದು ಅನ್ನಹತ್ತಿದಿರಿ.

ವಸಂತ:—ಆ ಕಥೆಯನ್ನು ಹೇಳಿದರೆ, ಕಣ್ಣೀರುಗಳು ಉಕ್ಕೇರಿಬರು ತ್ತವೆ. ಆದರೂ ಹೇಳುವೆನು ಕೇಳು. ಅಂದು ಹೇಮಂತನು ಬಂದು ನನ್ನ ನ್ನು ಹೇಮಂತನ ಮನೆಗೆ ಕರೆದೊಯ್ದನು; ಆಗ ಅಲ್ಲಿ ಮಲಕೆಯ ವಿಷಯ ವಾಗಿ ಮಾತು ನಡೆದಿತ್ತು. ಅದೇ ನನ್ನ ಹೃದಯದಲ್ಲಿ ವಿಷವೃಕ್ಷದ ಬೀಜ ವಾಯಿತು. ಮುಂದೆ ಮಲಕೆಯು ಹೋದರೂ, ಮತ್ತೊಂದು ವಿಚಾರವೇ ನನ್ನ ಮನಸಿನಲ್ಲಿ ಬರಲಿಲ್ಲ. ವಿಜಯನಗರಕ್ಕೆ ನಾನು ಎಲ್ಲಕ್ಕೂ ಮೊದಲು ಹೋದೆನು. ಅಲ್ಲಿ ಮುಟ್ಟಿದಮೇಲೆ, ಮಲಕೆಯು ಯಾವಾಗ ಬಂದಾಳು, ಮನೋಹರನ ಕೈತಪ್ಪಿಸಿ, ಯಾವಾಗ ನಾನು ಅವಳ ಕೈಹಿಡಿದೇನು, ಎಂದೆ ನಿಸಹತ್ತಿತು. ಅವಳಮೇಲಿನ ನನ್ನ ಮನಸ್ಸಾದದ್ದನ್ನು ಹೇಮಂತನ ಎದುರಿಗೆ ಹೇಳಿದೆನು. ಅವನು ಒಂದು ಯುಕ್ತಿಯಿಂದ ಮಲಕೆಯ ಮನಸ್ಸನ್ನು ನನ್ನ ಕಡೆಗೆ ಒಲಿಸಬೇಕೆಂದು ಮಾಡಿದನು. ಆದರೆ ಒಂದು ಮಾಡಲು ಹೋಗಿ ಮತ್ತೊಂದಾಯಿತು. ಏನಾಯಿತೆನ್ನುವದು ನಿನಗೆ ಎಲ್ಲವೂ ಗೊತ್ತಿರುವದು.

ಹೀರಾ:—(ತನ್ನಷ್ಟಕ್ಕೆ) ಅದಕ್ಕೂ ಮುಂದೆ ಏನಾಯಿತೆನ್ನುವದು ಸಹ ನನಗೆ ಗೊತ್ತಿರುವದು ಇವರಿಗೆ ಮಾತ್ರ ಗೊತ್ತಿಲ್ಲ. (ಪ್ರಕಾಶವಾಗಿ) ವಸಂತರಾಯರೇ ಮಲಕೆಯು ಸತ್ತಮೇಲೆ ಗಜರಾಬಾಯಿಯ ಮೇಲೆ ಯಾಕೆ ಸಿಟ್ಟಾದಿರಿ?

ವಸಂತ:—ಆಗ ನನಗೇನು ಹುಚ್ಚು ಹಿಡಿಯಿತೋ, ಉನ್ಮಾದವಾಯಿತೋ, ಸರಾಯಿಯು ತಲೆಗೇರಿತೋ, ಏನಾಯಿತೋ, ಏನೋ. ನನಗೆ ಏನೇ ಆಗಿರಲಿ. ಗಜರೆಯನ್ನು ಮಾತ್ರ ಕಳಕೊಂಡೆನು. ಮೊದಲು ನಾನು ವಿಜಯನಗರಕ್ಕೆ ಹೋಗಬಾರದಾಗಿತ್ತು. ಅಥವಾ ಅವಳಾದರೂ ಬರಬಾರದಾಗಿತ್ತು.

ಹೀರಾ:—(ತನ್ನಷ್ಟಕ್ಕೆ) ಈಗ ಕಳೆದುಕೊಂಡಿದ್ದರೂ ಮತ್ತೆ ಸಿಕ್ಕಾಳು. ಇನ್ನು ಇವರಿಬ್ಬರನ್ನು ಕೂಡಿಸಲಿಕ್ಕೆ ಅಡ್ಡಿಯಿಲ್ಲ. ಅದಕ್ಕೆ ಏನಾದರೂ ಯುಕ್ತಿಯಿಂದ ವಸಂತರಾಯರಿಗೆ ಗಜರಾಬಾಯಿಯು ಭೆಟ್ಟಿಯಾಗುವ ಹಾಗೆ ಮಾಡಬೇಕು. ಗಜರಾಬಾಯಿಯು ಇಲ್ಲಿಗೆ ಬರುವಹಾಗಿಲ್ಲ. ಆದ್ದರಿಂದ ವಸಂತರಾಯರನ್ನೇ ಏನಾದರೂ ನೆವದಿಂದ ಪ್ರಯಾಗಕ್ಕೆ ಕರೆದುಕೊಂಡು ಹೋಗಬೇಕು. ಒಳ್ಳೇದು ಇವರಿಗೆ ಹೀಗೆ ಅನ್ನುವೆನು (ಪ್ರಕಾಶವಾಗಿ) ವಸಂತರಾಯರೇ ಆದದ್ದು ಆಗಿ ಹೋಯಿತು. ಇನ್ನು ಮುಂದೆ ಅವಳ ವಿಷಯವಾಗಿ ಚಿಂತೆ ಮಾಡಬೇಡಿರಿ. ಹೋದವಳು ತಿರುಗಿ ಬರುವಳೇ? (ತನ್ನಷ್ಟಕ್ಕೆ) ನಿಜವಾಗಿ ತಿರುಗಿ ಬರುವಳು. (ಪ್ರಕಾ

ಶವಾಗಿ) ಆದ್ದರಿಂದ ಅವಳನ್ನು ಮರೆಯಲಿಕ್ಕೆ ಏನಾದರೂ ಉಪಾಯ ಮಾಡಿರಿ.

ವಸಂತ:—ಹೀರಾ, ಏನು ಉಪಾಯ ಮಾಡಲಿ ಹೇಳು.

ಹೀರಾ:—ಮತ್ತೆ ಯಾವ ಉಪಾಯವು, ತೀರ್ಥಯಾತ್ರೆಯು ಹೊರ್ತು? ಇಲ್ಲಿ, ಇನೆಲ್ಲಾ ಕಣ್ಣಿಗೆ ಬಿದ್ದು, ಪುನಃ ಗಜರಾಬಾಯಿಯೇ ನೆನಪಾಗುತ್ತಾಳೆ.

ವಸಂತ:—ಮನೆಯನ್ನು ಬಿಟ್ಟು ಎಲ್ಲಿ ಹೋಗಲಿ? ಹೀರಾ, ನನಗೆ ಎಲ್ಲಿಯಾದರೂ ಹೋಗಲಿಕ್ಕೆಸ್ಥಳ ವಿದ್ದರೆ, ವಿಜಯವಿಠ್ಠಲನ ಗುಹೆಯು ಮಾತ್ರ ಇರುವದು.

ಹೀರಾ:—ಅಲ್ಲಿಗೆ ಯಾಕೆ? ದೇಶದಲ್ಲಿ ಯಾತ್ರಾಸ್ಥಾನಗಳಿಲ್ಲವೇ? ಕಾಶಿ, ರಾಮೇಶ್ವರ, ಗಯಾ, ಪ್ರಯಾಗ, ಮುಂತಾದವುಗಳು ಎಷ್ಟೋ ಇರುವವಲ್ಲ?

ವಸಂತ:—ಹೀರಾ, ಈ ಸ್ತ್ರೀಘಾತಕನಿಗೆ, ಅಂಥಪವಿತ್ರ ಕ್ಷೇತ್ರಗಳು ಹೋಗತಕ್ಕ ಸ್ಥಳಗಳಲ್ಲ. ನಾನು ತಿರುಗಿ ಆ ಗುಹೆಗೆ ಹೋಗುವೆನು.

ಹೀರಾ:—ಅಲ್ಲಿ ಏನಿರುವದೆಂದು ಹೋಗುವಿರಿ?

ವಸಂತ:—ಗಜರೆಯಿಲ್ಲದಿದ್ದರೂ, ಗಜರೆಯ ಅಸ್ಥಿಪಂಜರವನ್ನಾದರೂ, ಮುಟ್ಟಿ ಹಿಡಿದು, ಕೃತಕೃತ್ಯನಾಗುವೆನು. ಛೇ! ನಾನು ಅಲ್ಲಿಗೆ ಹೋಗಲೇ ಬೇಕು; ಈಗಲೇ ಹೊರಟೆನು.

ಹೀರಾ:—ಛೀ! ವಸಂತರಾಯರೇ ಹುಚ್ಚರ ಹಾಗೆ, ಹೀಗೆ ಯಾಕೆ ಮಾಡುವಿರಿ? ನಿಲ್ಲಿರಿ.

ವಸಂತ:—ಹೀರಾ ನನ್ನನ್ನು ಬಿಡು. ಗಜರೆಯ ಪಾದಗಳು ಮೂಡಿದ ಸ್ಥಳಗಳಲ್ಲಿ ಉರುಳಾಡಿ ಬರುವೆನು; ಬಿಡು. ( ಹೋಗುತ್ತಾನೆ. )

ಹೀರಾ—( ತನ್ನಷ್ಟಕ್ಕೆ )ಇದೇನು? ಹೀಗೆ ಮಾಡ ಹತ್ತಿದರೆ, ಎಲ್ಲಿಯಾದರೂ ಹುಚ್ಚು ಹಿಡಿದೀತು. ಹೋದರು! ನಿಜವಾಗಿ ಅಲ್ಲಿಗೇ ಹೊರಟರಲ್ಲ! ಬೇಗನೆ ಯಾವದಾದರೊಂದು ಉಪಾಯದಿಂದ, ಗಜರಾಬಾಯಿಯ ಭೆಟ್ಟಿಯನ್ನು ಮಾಡಿಸಲಿಕ್ಕೆ ಬೇಕು. ಒಳ್ಳೇದು, ವಸಂತರಾಯರು ಪುನಃ ವಿಜಯವಿಠ್ಠಲನ ಗುಡಿಗೆ ಹೋಗಿ ಏನು ಮಾಡುವರೋ ನೋಡುವೆನು. ( ಹೋಗುತ್ತಾಳೆ )

## ೫ನೇ ಅಂಕು. ೫ನೇ ಪ್ರವೇಶ

( ಸ್ಥಳ—ವಿಜಯು ವಿಠ್ಠಲನ ಗುಡಿಯೊಳಗಿನ ಗುಹೆ )

( ವಸಂತನೂ ಹೀರೆಯೂ ಬರುತ್ತಾರೆ. )

ವಸಂತ—ಎಲಾ ಇದೇ ಆ ಗುಹೆಯಲ್ಲವೇ ? ಹೌದು ಇದೇ ಆ ಗುಹೆಯು; ಇದೇ ಕಿಂಡಿ, ನಾನು ಕಲ್ಲು ಅನಿಸಿದ್ದು. ಎಲುವು ಸಹ ಕಾಣುವದಿಲ್ಲವಲ್ಲ ?

ಹೀರಾ—( ತನ್ನಷ್ಟಕ್ಕೆ )ಎಲಬು ಕಾಣುವ ಹಾಗಿದ್ದರೆ, ನಾನ್ಯಾತಕ್ಕೆ ಬರಲಿ ?

ವಸಂತ—ಗಜರಾ, ನಿನ್ನನ್ನು ಇನ್ನೆಲ್ಲಿ ಹುಡುಕಲಿ ?

( ಎಲ್ಲಿ ಪೋಗಲಿ ನಾ ಇನ್ನು ಎಂಬಂತೆ )

ಜಗದೊಳಿನ್ನೆಲ್ಲಿರುವಿ । ಎನ್ನನು ನೀ
ನಗೆಗೀಡು ಮಾಡಿದಿಯಾ ॥ ಪಲ್ಲ ॥
ಅಗಲಿ ಪೋಗೆಲ್ಲಡಗಿ ಕೊಂಡು ನೀ ।
ಬಗೆಬಗೆಯು ವಿರಹ ವ್ಯಥೆಗಳಿಂ ।
ಭುಗಿಲೆನಿಸಿ ಎನ್ನೆದೆಯ ನೊಡದಿಯೆ ।
ಮೃಗನಯನೆ ಬಂಮುಳುಹುಜೀವವ ॥ ಅನುಪಲ್ಲ ॥

ಚಾಂಡಾಲರೆಳೆದೊಯ್ದರೋ । ಶ್ವಾಪದಗಳ್ ।
ಕೊಂಡೊಯ್ದುವೋತಿನ್ನಲು ।
ಬೆಂಡಿನಂತಾಗಿರ್ದ ನಿನ್ನನು ।
ಕಂಡು ಕನಿಕರದಿಂದಲಾವನು ।
ಅಂಡಲೆಯದೆಲ್ಲಿರಿಸಿದನೋಭೂ ।
ಮಂಡಲದೊಳರವಿಂದನಯನೇ ॥ ೧ ॥
ಬೆರಳು ಮೂಡಿದ ಪತ್ರವ । ನದರಡಿಯೋ ।
ಳಿರುವ ವಿಷದ ಪಾತ್ರೆಯ ।
ವಿರಳವಾಗಿಹ ಹೆಜ್ಜೆಗಳವೋಣ್ ।
ನಿರುತನೋಡುತಲಿವೆಗಳಿಕ್ಕದೆ ।
ಮರೆಯುಲೆಂತೀರಮಣಿರನ್ನವ ।
ಸುರಿವಶೋಕದಿನೂಕಿ ಪೋದಳು ॥ ೨ ॥

ಅಯ್ಯೋ! ನನಗೆ ಎಲ್ಲಿ ಹೋದರೂ ಸಮಾಧಾನವಿಲ್ಲವಲ್ಲ! ಗಜರೆಯ ಅಸ್ಥಿಗಳನ್ನಾದರೂ ಕಾಣಬೇಕೆಂದು ಬಂದೆನು. ಇಲ್ಲಿ ಅವೂ ಕಾಣುವದಿಲ್ಲವಲ್ಲ? ಗಜರಾ, ನಾನಿಟ್ಟ ವಿಷವನ್ನು ನೀನು ಕುಡಿದಿರಬಹುದೇನು? ಹಾಗಾದರೆ, ನಿನ್ನ ಅಧರಸ್ಪರ್ಶವನ್ನು ಅನುಭವಿಸಿದ, ಈ ಬಟ್ಟಲದ ಅಂಚಿಗಾದರೂ ನಾನು ಮುದ್ದುಕೊಡುವೆನು. (ಬಟ್ಟಲವನ್ನು ಕೈಯ್ಯಲ್ಲಿತಕ್ಕೊಂಡು) ಇಲ್ಲ. ವಿಷವನ್ನು ಕುಡಿದಿಲ್ಲ. ವಿಷವೆಲ್ಲ ಒಣಗಿ ಗಟ್ಟಿಯಾಗಿ ತಳಕ್ಕೆ ಕುಳಿತಿರುವದು. ಗಜರಾ; ಹಾಗಾದರೇನು ಮಾಡಲಿ! ಯಾವ ರೀತಿಯಿಂದ ಈ ಅನುತಾಪವನ್ನು ಕಳೆದುಕೊಳ್ಳಲಿ? ಸುಮ್ಮನೇ, ಇಲ್ಲಿಯೇ ಕುಳಿತು ನಿನ್ನನ್ನು ನೆನೆಯ ಹತ್ತುವೆನು.

ಹೀರಾ—ವಸಂತರಾಯರೇ ಏಳಿರಿ. ಊರಿಗೆ ಹೋಗೋಣ ಹೀಗೆ ಯಾಕೆ ಹುಚ್ಚರ ಹಾಗೆ ಮಾಡುವಿರಿ?

ವಸಂತ—ನಾನು ಬರುವದಿಲ್ಲ. ನನಗೆ ಮನೆಮಾರುಗಳೂ, ಊರುಕೇರಿಗಳೂ ಏನೂ ಬೇಡ. ಗಜರೆಯನ್ನು ಧೇನಿಸುತ್ತ ಇಲ್ಲಿಯೇ ಕುಳಿತುಕೊಳ್ಳುತ್ತೇನೆ.

ಹೀರಾ—(ತನ್ನಷ್ಟಕ್ಕೆ) ಇನ್ನೇನು ಗತಿ? (ಪ್ರಕಾಶವಾಗಿ) ವಸಂತರಾಯರೇ? ಮನೆಮಾರುಗಳನ್ನು ಬಿಟ್ಟು ಏನು ಬೈರಾಗಿಗಳಾಗುವಿರಾ? ಛೀ! ಏಳಿರಿ. ಊರಿಗೆ ಹೋಗೋಣ.

ವಸಂತ—ಹೌದು ನಾನು ಬೈರಾಗಿಯಾಗುವೆನು.

ಹೀರಾ—ಹಾಗಾದರೆ, ಗಜರೆಯ ಚಿಂತೆಯನ್ನು ಬಿಡಬೇಕಾದೀತು.

ವಸಂತ—ಒಳ್ಳೇದಾಯಿತು. ಅದರ ಕೂಡ ನನ್ನ ಪಶ್ಚಾತ್ತಾಪವಾದರೂ ಹೋದೀತು.

ಹೀರಾ—(ತನ್ನಷ್ಟಕ್ಕೆ) ಈ ಪ್ರಸಂಗದ ಉಪಯೋಗವನ್ನು ಚನ್ನಾಗಿ ಮಾಡಿಕೊಳ್ಳಬೇಕು. (ಪ್ರಕಾಶವಾಗಿ) ಹಾಗಾದರೆ ನಡೆಯಿರಿ. ನಾನೂ ಬರುವೆನು. ಬೈರಾಗಿಯಾಗಿ ಎಲ್ಲಿ ಹೋಗೋಣ!

ವಸಂತ—ಬೈರಾಗಿಗಳು ಹೋಗುವ ಸ್ಥಳವೆಲ್ಲಿ? ದೇವರ ಸ್ಮರಣೆಯನ್ನು ಮಾಡುತ್ತ, ದೇಶಾಂತರಕ್ಕೆ ಹೋಗೋಣ.

ಹೀರಾ—(ತನ್ನಷ್ಟಕ್ಕೆ) ಒಳ್ಳೇದು, ಇದೇ ನೆವದಿಂದ ಇವರನ್ನು ಪ್ರಯಾಗಕ್ಕೆ ಕರೆದುಕೊಂಡು ಹೋಗಿ, ಗಜರಾಬಾಯಿಯ ಭೆಟ್ಟಿಯನ್ನು

ಮಾಡಿಸುವೆನು. ( ಪ್ರಕಾಶವಾಗಿ )ನಡೆಯಿರಿ, ಹಾಗಾದರೆ; ಇನ್ನು ಯಾಕೆ ಗಜರೆಯ ವಿಷಯವಾಗಿ ವಿಚಾರ ?

ವಸಂತ—( ತನ್ನಷ್ಟಕ್ಕೆ )ಗಜರೆಯ ವಿಷಯವಾಗಿ ವಿಚಾರವು ಹ್ಯಾಗೆ ತಪ್ಪೀತು. ಬೈರಾಗಿಯಾದರೂ ತಪ್ಪಲಿಕ್ಕಿಲ್ಲ; ಸತ್ತರೂ ತಪ್ಪಲಿಕ್ಕಿಲ್ಲ. ಆದರೂ ಹೀಗೆ ಪಶ್ಚಾತ್ತಾಪ ಪಡುವದಕ್ಕಿಂತ ಬೈರಾಗಿಯಾಗಿ ಹೋಗುವದು ಲೇಸು.

ಹೀರಾ—ಯಾಕೆ, ಸುಮ್ಮನೆ ಕುಳಿತಿರಿ ? ಬೈರಾಗಿಯಾಗಿರಿ.

ವಸಂತ—ಇಕೋ, ನೋಡು ಬೈರಾಗಿಯಾಗುವೆನು ( ರುಮಾಲವನ್ನು ಕಳೆದು ಜೋಳಿಗೆ ಮಾಡುತ್ತಾನೆ )ಇದನ್ನು ಜೋಳಿಗೆಯನ್ನು ಮಾಡುತ್ತೇನೆ. ( ತನ್ನಷ್ಟಕ್ಕೆ )ಇರಲಿ ಈ ಬಟ್ಟಲವನ್ನು ಸಂಗಡ ಒಯ್ಯೋಣ. ಕದಾಚಿತ್ ಗಜರೆಯು ನೆನಪಾದಾಗ, ಇವರ ಕಡೆಗೆ ನೋಡಿ ನನ್ನ ದುಃಖವನ್ನು ಹೋಗಲಾಡಿಸುವೆನು. ಇದನ್ನು ಗಜರೆಯು ತನ್ನ ತವರಮನೆಯಿಂದ ತಂದಿದ್ದಳು. ಇದರಲ್ಲಿ ನನಗೆ ಹಾಲು ಸಕ್ಕರೆ ಕುಡಿಯಲಿಕ್ಕೆ ಕೊಡುತ್ತಿದ್ದಳು. ಇದರಲ್ಲಿಯೇ ಕಡೆಗೆ ನಾನು ಅವಳಿಗೆ ವಿಷವನ್ನು ಕುಡಿಯಲಿಟ್ಟೆನು. ಇನ್ನೂ ಇದರ ಚರಿತ್ರವು ಏನೇನಿರುವದೋ ಏನೋ. (ಬಟ್ಟಲವನ್ನು ಜೋಳಿಗೆಯಲ್ಲಿ ಹಾಕುತ್ತಾನೆ. )

ಹೀರಾ—ಆ ಬಟ್ಟಲವನ್ನೇಕೆ ತಕ್ಕೊಳ್ಳುವಿರಿ ? ಅದು ಗಜರೆಯ ವಿಷದ ಬಟ್ಟಲವು. ಅದನ್ನು ನೋಡಿದ ಕೂಡಲೆ ಪುನಃ ಅವಳೇ ನೆನಪಾದಾಳು. ಅದನ್ನು ಅಲ್ಲಿಯೇ ಚಲ್ಲಿ ಬಿಡರಿ.

ವಸಂತ—ಇರಲಿ, ಅದು ನಮ್ಮ ಕೂಡ ಇರಲಿ. ಮನೆಯಲ್ಲಿ, ಅಷ್ಟೈಶ್ವರ್ಯವಿದ್ದರೂ, ಬೈರಾಗಿಯಾದಮೇಲೆ, ಭಿಕ್ಷೆ ಬೇಡಲಿಕ್ಕೆ ಒಂದು ಪಾತ್ರೆಯು ಸಹ ಇಲ್ಲ. ಇದರಲ್ಲಿ ಭಿಕ್ಷೆ ಬೇಡಲಿಕ್ಕೆ ಬರುವದು.

ಹೀರಾ—ಒಳ್ಳೇದು, ನಡೆಯಿರಿ ಹೋಗೋಣ.

( ಮುಂದೆ ಬಂದು )

( ನಿನ್ನ ವಸ್ತುವನು ನೋಡು ನೋಡು ಎಂಬಂತೆ )
ಪ್ರಭುವಿನ ಭಜನೆಯ ಮಾಡೋ ॥ ಮನುಜಾ ।
ಪ್ರಭುವಿನ ಭಜನೆಯ ಮಾಡು ॥ ಪಲ್ಲ ॥

ಭಜನೆಯ ರುಚಿಯನು ನೋಡು ।
ತತ್ವದ ಬೀಡು ।
ಸಲೆ ತಿಳಿ ಮೂಢ ಮನುಜಾ ॥ ೧ ॥

( ವಸಂತನಿಗೆ )ಯಾಕೆ ? ಮತ್ತೆ ಗಜರೆಯು ನೆನಪಾದಳೇನು ? ಜೈರಾಗಿಯಾದ ಮೇಲೆ ತೀರಿತು. ಭಜನ ಮಾಡ ಬನ್ನಿರಿ.

ಇಬ್ಬರೂ—

ಸರಿವುದು ಮಾತೆಯು ದೂರ ।
ಪುಣ್ಯಾಸಾರ ।
ಕ್ಲೇಶ ಕುಠಾರ ಮನುಜಾ ॥ ೨ ॥

( ಇಬ್ಬರೂ ಹೋಗುತ್ತಾರೆ. )

---

## ೬ನೇ ಅಂಕು. ೧ನೇ ಪ್ರವೇಶ.

ಸ್ಥಳ—ಪ್ರಯಾಗದಲ್ಲಿಯ ಸಂಜೀವನ ಮನೆ

( ಗಜರೆಯು ಚಿಂತಾಗ್ರಸ್ತಳಾಗಿ ಒಬ್ಬಳೇ ಕುಳಿತಿರುತ್ತಾಳೆ. )

ಯಾಕೆ ಬಾರ ಜನ್ಮಾಂತರ ಬಾಂಧವ ।
ಹಾಕುವೆ ದಿನಗಳ್ ವರ್ಷದ ಪರಿಯಿಂ ॥ ಪಲ್ಲ ॥
ಸಂಜೀವನನೀ ಜೀವವನುಳುಹಿದ ।
ಅಂಜಿದೆರಳೆವೆಣ್ಣಿನದನಿಯಾಲಿಸಿ ॥ ೧ ॥
ಸಾಕಿ ಸಲುಹಿ ಕೈಪಿಡಿದವರೆಂದಿಗೂ ।
ನೂಕಿರಲೆನ್ನನು ಜೋಕೆ ಮಾಡಿದ ॥ ೨ ॥
ಹತವಿಧಿ ಬೆನ್ನಟ್ಟುತ ನಿರ್ಬಲಳನು ।
ಕ್ಷತದ ಮೇಲೆ ತಾಂಕಾರವಬೀರುವ ॥ ೩ ॥

ಸಂಜೀವನು ನಾಲ್ಕಾರು ದಿವಸಗಳಲ್ಲಿ ಬರುವೆನೆಂದು ಹೇಳಿದ್ದನು. ಇನ್ನೂ ಯಾಕೆ ಬಂದಿರಲಿಕ್ಕಿಲ್ಲ ? ( ಸುಮ್ಮನೆ ನಿಲ್ಲುತ್ತಾಳೆ )

ಸುಶೀಲಾ—( ಒಳಗೆ ಬಂದು )ಅಮ್ಮನವರೇ ಟಪಾಲಿನವನು, ಈ ಪತ್ರವನ್ನು ತಂದು ಕೊಟ್ಟನು.

ಗಜರಾ—( ಒಡೆದು ಓದಿಕೊಂಡು )ಅಯ್ಯೋ ವಿಧಿಯೇ !

( ಮೂರ್ಛೆಹೊಂದುತ್ತಾಳೆ )

ಸುಶೀಲಾ--ಅಮ್ಮನವರೇ, ಅಮ್ಮನವರೇ, ಏನಾಯಿತು ? ಏನಾಯಿತು ? ಅಯ್ಯಯ್ಯೋ ! ಮಾತಾಡವೊಲ್ಲರು, ಸ್ಮೃತಿಯಿಲ್ಲ. ಅಯ್ಯಯ್ಯೋ ! ಇನ್ನೇನು ಮಾಡಲಿ? ನನ್ನ ಹತ್ತರ ಮತ್ತೆ ಯಾರೂ ಇಲ್ಲವಲ್ಲ? ಅಮ್ಮಾ, ಗಜರಾಬಾಯಿಯವರೇ, ನಿಮಗೆ ಏನಾಯಿತು ? ಹೀಗೆ ಯಾಕೆ ಮಾಡುವಿರಿ ನಾನು ಯಾರು? ನನ್ನ ಗುರುತು ಹತ್ತುವದೋ ಇಲ್ಲವೋ, ಅಯ್ಯಯ್ಯೋ ! ಸ್ವಲ್ಪಾದರೂ ಸ್ಮೃತಿಯಿಲ್ಲವಲ್ಲ ? ಅಯ್ಯಯ್ಯೋ ! ತುಸು ನೀರನ್ನಾದರೂ ತಂದು ಕೊಡಲಿಕ್ಕೆ ಹತ್ತರ ಯಾರೂ ಇಲ್ಲ. ( ಅಳುತ್ತಾಳೆ )

ಸಂಜೀವ:—( ಒಳಗೆ ಬಂದು )ಸುಶೀಲಾ, ಯಾಕೆ? ಏನಾಯಿತು ? ಅಳುವಿಯೇಕೆ ?

ಸುಶೀಲಾಃ—ಸಂಜೀವರಾಯರೇ, ಬೇಗ ಬನ್ನಿರಿ. ನಿಮ್ಮ ತಂಗಿಯನ್ನು ಉಳಿಸಿಕೊಳ್ಳಿರಿ

ಸಂಜೀವಃ—(ಗಜರೆಯನ್ನು ನೋಡಿ) ಏನಾಗಿರುವದು ?

ಸುಶೀಲಾ—ಇದೇ ಈಗ ಈ ಪತ್ರವು ಬಂದಿತು. ಇದನ್ನು ಓದುತ್ತ ಓದುತ್ತ, ಒಮ್ಮೆಲೇ ಮೂರ್ಛೆ ಹೊಂದಿದರು.

ಸಂಜೀವ— ಮೊದಲು ತುಸು ನೀರು ತಕ್ಕೊಂಡು ಬಾ.

( ಸುಶೀಲೆಯು ನೀರು ತಂದು ಕೊಡುತ್ತಾಳೆ )

ಸಂಜೀವ—( ಗಜರೆಯ ನೆತ್ತಿಗೆ ನೀರು ಬಡೆದು )ಗಜರಾ, ಗಜರಾ,

ಗಜರಾ—( ಎಚ್ಚತ್ತು )ಅಯ್ಯಯ್ಯೋ! ವೈಧವ್ಯವು ನನ್ನನ್ನೂ ಬಿಡಲಿಲ್ಲವೇ ? ಪ್ರಾಣನಾಥರೇ ಎಲ್ಲಿ ಹೋದಿರಿ ? ( ಪುನಃ ಮೂರ್ಛಿತಳಾಗುತ್ತಾಳೆ. )

ಸಂಜೀವ—ಸುಶೀಲಾ, ನೀನು ನೆತ್ತಿಗೆ ನೀರು ಬಡೆಯುತ್ತ ಇಲ್ಲಿಯೇ ಕುಳಿತುಕೋ. ಬೇಗನೆ ಹೋಗಿ ನಾನು ವೈದ್ಯನನ್ನು ಕರೆದುಕೊಂಡು ಬರುವೆನು. ( ಹೋಗುತ್ತಾನೆ )

( ಸಂಜೀವನೂ ವೈದ್ಯನೂ ಒಳಗೆ ಬರುತ್ತಾರೆ )

ವೈದ್ಯ—( ಗಜರೆಗೆ ಒಂದು ಔಷಧವನ್ನು ಮೂಸಿ ನೋಡಿಸಿ )ಅಮ್ಮಾ ನಿನಗೆ ಈಗ ಎಚ್ಚರಾಯಿತೇ ? ಇಕೋ ಇದನ್ನು ಕುಡಿ. ( ಒಂದು ಔಷಧವನ್ನು ಕುಡಿಸುತ್ತಾನೆ. )ನೀವು ಇವಳಿಗೆ ಯಾವ ತ್ರಾಸವನ್ನೂ ಮಾಡಬೇಡಿರಿ. ಯಾರೂ ಮಾತಾಡಿಸಬೇಡಿರಿ. ಇವಳಿಗೆ ಈಗ ನಿದ್ರೆ ಹತ್ತು

ವದು. ಎಚ್ಚರಾದ ಮೇಲೆ ಹಿಂದಾದ ಸಂಗತಿಗಳಬಗ್ಗೆ ಯಾವ ಮಾತನ್ನೂ ತೆಗೆಯ ಬೇಡಿರಿ

ಸಂಜೀವ—ಯಾಕಾಗವೊಲ್ಲದು, ನೀವು ಹೇಳಿದಂತೆಯೇ ಮಾಡುವೆವು. ( ವೈದ್ಯನು ಹೋಗುತ್ತಾನೆ )

ಸಂಜೀವ—( ವೈದ್ಯನನ್ನು ಕಳಿಸಿ ತಿರುಗಿ ಬಂದು )ಸುಶೀಲಾ ಏನಾಯಿತು ? ಎಲ್ಲವನ್ನೂ ವಿಸ್ತಾರವಾಗಿ ಹೇಳು.

ಸುಶೀಲಾ—ನೀವು ಹೋದ ದಿವಸದಿಂದ ಇಂದಿನವರೆಗೆ ನೆಟ್ಟಗಿದ್ದರು. ಕಡೆಯ ಎರಡು ಮೂರು ದಿವಸ ಮಾತ್ರ ನೀವು ಬರಲಿಲ್ಲವೆಂದು ಬಹಳ ಚಿಂತೆ ಮಾಡಹತ್ತಿದ್ದರು. ನಾನು ಸಮಾಧಾನ ಹೇಳಿ ಸುಮ್ಮನಿರಿಸಿದ್ದೆನು. ಈಹೊತ್ತು ಅದೇ ಕಾರಣದಿಂದ ಪುನಃ ವ್ಯಾಕುಲರಾಗಿ ಒಬ್ಬರೇ ಕೋಣೆಯೊಳಗೆ ಕುಳಿತಿದ್ದರು. ಟಪಾಲಿನವನು ಒಂದು ಪತ್ರವನ್ನು ತಂದು ಕೊಟ್ಟನು. ಅವನ್ನು ನಾನು ಒಳಗೆ ಒಯ್ದು ಕೊಟ್ಟಮೇಲೆ, ಒಡೆದು ಓದಿಕೊಳ್ಳಹತ್ತಿದರು. ಇನ್ನೂ ಅರ್ಧ ಪತ್ರವನ್ನು ಸಹ ಓದಿರಲಿಕ್ಕಿಲ್ಲ. ಅಷ್ಟರಲ್ಲಿ ಒಮ್ಮೆಂದೊಮ್ಮೆಲೇ ಬಿಕ್ಕಿ ಬಿಕ್ಕಿ ಅಳಹತ್ತಿ, ನೆಲಕ್ಕೆ ಬಿದ್ದು, ಮೂರ್ಛೆ ಹೊಂದಿದರು. ತುಸು ಹೊತ್ತಿನಲ್ಲಿ ನೀವೂ ಇಲ್ಲಿಗೇ ಬಂದಿರಿ.

ಸಂಜೀವ—ಆ ಪತ್ರವು ಎಲ್ಲಿರುವದು.

ಸುಶೀಲಾ—ಗಜರಾಬಾಯಿಯವರ ಹತ್ತರವೇ ಬಿದ್ದಿರುವದು.

ಸಂಜೀವ—ಸ್ವಲ್ಪಾದರೂ ಸಪ್ಪಳ ಮಾಡದೆ ಹೋಗಿ ಅದನ್ನು ತಕ್ಕೊಂಡು ಬಾ.

[ ಸುಶೀಲೆಯು ಪತ್ರವನ್ನು ತಂದು ಕೊಡುತ್ತಾಳೆ. ]

ಸಂಜೀವ—[ ಅದನ್ನು ಓದಿ ] ಎಲಾ ! ವಸಂತ ಸತ್ತನೇ ! ಸುಳ್ಳು ! ಈ ಸುದ್ದಿಯು ಸುಳ್ಳು. ಇಲ್ಲಿಗೆ ಹೊರಡುವದಕ್ಕೆ ಒಂದೇ ದಿವಸ ಮೊದಲು ನಾವು ಅವನನ್ನು ಕಂಡಿರುವೆನು. ಒಮ್ಮೆಂದೊಮ್ಮೆಲೇ ಹೇಗೆ ಸಾಯುವನು ? ಇದರಲ್ಲೇನೋ ಕಪಟವಿರಲಿಕ್ಕೆಬೇಕು; ಒಳ್ಳೆದು. ಪೂರ್ಣ ಓದೋಣ [ ಓದುತ್ತಾನೆ. ] ಹಾ ! ನನ್ನ ತರ್ಕವೇ ನಿಜವು. ಇಲ್ಲದಿದ್ದರೆ ಪತ್ರಕ್ಕೆ ಹೆಸರು ಯಾಕಿಲ್ಲ? ಇವನೇನೋ ಹಿತಚಿಂತಕನಂತೆ ! ಹಿತಚಿಂತಕನೋ ಹಿತಶತ್ರುವೋ! ಒಮ್ಮೆಂದೊಮ್ಮೆಲೇ ಇಂಥ ಸುದ್ದಿಯು ಬಂದಮೇಲೆ-ಅದೂ ನಾನು ಊರೊಳಗೆ ಕೂಡಾ ಇಲ್ಲ-ಅಂದಮೇಲೆ ಇಂಥ ಅನರ್ಥವಾಗುವದು ಅಸಂಭವವೆ ? ಇನ್ನು ಇವಳಿಗೆ ನಿನ್ನ ಗಂಡನು ಜೀವದಿಂದ ಇರುವನೆಂದು ಹ್ಯಾಗೆ ಮನವರಿಕೆ ಮಾಡಿ ಕೊಡಬೇಕು? ಮೊದಲು ಹೇಳಿ ನೋಡುವೆನು.

ಬರೇ ಮಾತಿನ ಮೇಲೆ ವಿಶ್ವಾಸವನ್ನಿಡದಿದ್ದರೆ, ಸ್ವಲ್ಪ ನೆಟ್ಟಗಾದಕೂಡಲೇ ಇವಳನ್ನು ಊರಿಗೆ ಕರೆದುಕೊಂಡುಹೋಗಿ, ಇವಳ ಗಂಡನಭೆಟ್ಟಿಯನ್ನು ಮಾಡಿಸುವೆನು, ಇದಂತೂ ಆಯಿತು. ಆದರೆ ಈ ಹಿತಚಿಂತಕನೆಂಬ ನೀಚನು ಯಾವನಿರಬಹುದು? ಇದೆಲ್ಲ ಏನೋ ಒಂದು ವಿಚಿತ್ರ ಆಟವೇ ಕಾಣುತ್ತದೆ. ಒಳ್ಳೇದು. ಇದರ ಸೂತ್ರಧಾರನನ್ನು ನಾನು ಗೊತ್ತುಹಚ್ಚಲಿಕ್ಕೇಬೇಕು.

[ ಪಡದೇ ಬೀಳುತ್ತದೆ ]

---

೬ನೇ ಪ್ರವೇಶ.

( ಸ್ಥಳ:— ಸಂಜೀವನ ಮನೆಯ ಹೂದೋಟ. )

ಸುಶೀಲಾ:— ( ಒಳಗೆ ಬಂದು, ತನ್ನಷ್ಟಕ್ಕೆ ) ಹಾ! ಗಜರಾಬಾಯಿಯು ದಿನ ದಿನಕ್ಕೆ ಕ್ಷೀಣಳಾಗಹತ್ತಿದಳು. ವೈದ್ಯನ ಉಪಾಯಗಳೇನೂ ನಡೆಯುವೊಲ್ಲವು. ಪಾಪ! ಬಡಪ್ರಾಣಿಗೆ ನೆಟ್ಟಗಾಗಬೇಕು. ದೂರದೇಶದವಳು; ಸಮೀಪಕ್ಕೆ ಅಣ್ಣನ ಸಮಾನನಾದ ಸಂಜೀವರಾಯನ ಹೊರ್ತು ಆಪ್ತೇಷ್ಟರು ಸಹ ಯಾರೂ ಇಲ್ಲ. ಆತನಾದರೂ ಎಂಥ ಒಳ್ಳೆವನು? ಹಸಿವೆ-ನೀರಡಿಕೆಗಳ ಪರವೆಯಿಲ್ಲದೆ, 'ತಂಗೀ, ತಂಗೀ,' ಎನ್ನುತ್ತ ಅವಳ ಶೇವಾಶುಶ್ರೂಷೆಯಲ್ಲಿಯೇ ಕಾಲಕಳೆಯುವನು. ಪಾಪ! ಅವನಾದರೂ ಏನು ಮಾಡ್ಯಾನು? ಇಂಥ ಸ್ಥಿತಿಯಲ್ಲಿದ್ದವಳನ್ನು ಕರೆದುಕೊಂಡು ತನ್ನ ಊರಿಗೂ ಹೋಗುವಹಾಗಿಲ್ಲ. ಇಲ್ಲಿಗಾದರೂ ಯಾರನ್ನೂ ಕರೆಯಿಸುವಹಾಗಿಲ್ಲ. ಕರೆಕಳುಹಿದರೆ ಬರುವವರಾದರೂ ಯಾರು? ಗಜರಾಬಾಯಿಯ ತಾಯಿಯೊಬ್ಬಳು. ಆದರೆ ಈ ಮಾತನ್ನು ತೆಗೆದಕೂಡಲೆ, ಗಜರಾಬಾಯಿಯು ಒಮ್ಮಿಂದೊಮ್ಮೆಲೇ ಅಳಹತ್ತುವಳು. ತಾಯಿಯನ್ನು ಕರೆಕಳಿಸಬೇಡಿರಿ. ಪುನಃ ನನ್ನಸಲುವಾಗಿ ಅವಳಿಗೆ ದುಃಖ ಯಾಕೆ ಮಾಡಬೇಕು? ಎಂದು ಅನ್ನುವಳು. ಅದಕ್ಕಾಗಿ ಸಂಜೀವರಾಯರಿಗೆ ದೊಡ್ಡ ಚಿಂತೆಬಂದಿರುವದು. ಇಕೋ! ಸಣ್ಣಮೋರೆ ಮಾಡಿಕೊಂಡು, ಇತ್ತಲೇ ಬರುವರು.

ಸಂಜೀವ:—( ಒಳಗೆ ಬಂದು ) ಸುಶೀಲಾ ಯಾಕೆ, ಇಲ್ಲಿ ಯಾಕೆ ಸುಮ್ಮನೆ ನಿಂತಿ?

ಸುಶೀಲಾ:— ಯಾಕಿಲ್ಲ. ಗಜರಾಬಾಯಿಗೆ ಎಂದು ನೆಟ್ಟಗಾದೀತೋ, ಎಂದು ಚಿಂತಿಸುತ್ತಿದ್ದೆನು.

ಸಂಜೀವ:— ಸುಶೀಲಾ, ಅವಳು ನೆಟ್ಟಗಾದಾಳೆಂದು ನನಗೇನೂ ತೋರುವದಿಲ್ಲ. ಈಪರಿಯಿಂದ ಕ್ಷೀಣಳಾದರೆ ಹ್ಯಾಗೆ ನೆಟ್ಟಗಾದಾಳು? ಇಂಥ ಉತ್ತಮ ವಸ್ತುವನ್ನು ದೇವರಾದರೂ ನಮಗೆ ಯಾಕೆ ದಕ್ಕಗೊಟ್ಟಾನು? ಸುಶೀಲಾ, ಇಂದು ನಾಳೆ ಇಷ್ಟರಲ್ಲಿಯೇ ಬರುವ ಆ ಕೆಟ್ಟ ಹೊತ್ತಿನ ಹಾದಿಯನ್ನೇ ನೋಡುತ್ತ ನಾನು ಬೆರಳು ಎಣಿಸುತ್ತಿರುವೆನು. ( ಅಳುತ್ತಾನೆ )

ಸುಶೀಲಾ:— ಸಂಜೀವರಾಯರೇ ನೀವು ಧೈರ್ಯಬಿಡಬೇಡಿರಿ. ನಿಮ್ಮಂಥವರೇ ಹೀಗೆ ಅಳಹತ್ತಲು, ನಾವು ಹೆಣ್ಣುಮಕ್ಕಳೇನು ಮಾಡಬೇಕು? ಅವಳ ದೈವದಲ್ಲಿ ಮರಣೇ ಬರುವದೆಂದು ನಿಶ್ಚಿತವಿದ್ದರೆ, ನಾವು ಅತ್ತು ಕರೆದು ಮಾಡುವದೇನು? ಸಾಯುವವರೆಗೆ ಅವಳಿಗೆ ಮಾತ್ರ ಹೆಚ್ಚು ಸಂತಾಪಕ್ಕೆ ಕಾರಣವು.

ಸಂಜೀವ:— ಏನಾಗುವದೋ ಆಗಲಿ. ದೈವವನ್ನವಲಂಬಿಸಿ ಸುಮ್ಮನೆ ಕೂಡ್ರುವೆನು. ಸುಶೀಲಾ, ನಾನು ಇಲ್ಲಿಗೆ ಬಂದ ದಿವಸದಿಂದ ದಿನದಿನಕ್ಕೆ ಬೇನೆಯು ಹೆಚ್ಚಾಗಹತ್ತಿತು. ನಾನು ಬೇಗನೇ ತಿರುಗಿಬರಲಿಲ್ಲ. ಹೊರಟು ನಿಂತವನನ್ನು ನನ್ನ ತಂಗಿಯು ಜುಲುಮೆಮಾಡಿ ಎರಡು ದಿವಸ ಹೆಚ್ಚಿಗೆ ನಿಲ್ಲಿಸಿದಳು. ಬೇಗನೆ ತಿರುಗಿ ಬಂದಿದ್ದರೆ ಏನಾಗುತ್ತಿತ್ತೋ ಏನೋ!

ಸುಶೀಲಾ—ಸಂಜೀವರಾಯರೇ, ಆ ಪತ್ರವೇ ಅವಳಿಗೆ ಬಲು ಘಾತಕವಾಯಿತು. ಅಂದು ಮೂರ್ಛೆ ಬಂದು ಬಿದ್ದವಳು, ಇಂದಿಗೂ ಹಾಸಿಗೆಯನ್ನು ಬಿಟ್ಟೇ ಇಲ್ಲ.

ಸಂಜೀವ—ಆ ದುಷ್ಟವಾರ್ತೆಯನ್ನು ಯಾವ ಯಮದೂತನು ಬರೆದು ಕಳುಹಿದನೋ ಏನೋ! ಸುಶೀಲಾ, ನಿನಗೆ ನಾನು ಆಣೆ ಮಾಡಿ ಹೇಳುವೆನು. ಆ ಸುದ್ದಿಯು ಎಂದೂ ನಿಜವಿಲ್ಲ. ನಾನು ಇಲ್ಲಿಗೆ ಬರುವ ಹಿಂದಿನ ದಿವಸ. ವಸಂತರಾಯನನ್ನು ಇವೇ ಕಣ್ಣುಗಳಿಂದ ನೋಡಿರುವೆನು. ಹೀಗೆ ಹೇಳಲು ಗಜರೆಗೆ ಮನವರಿಕೆಯಾಗವೊಲ್ಲದು. ಇದಕ್ಕೆ ನಮ್ಮ ಊರೊಳಗೆ ಯಾರ ಸಾಕ್ಷಿಯುಬೇಕು, ಹೇಳೆಂದು ಕೇಳಿದರೆ, ಏನೂ ಮಾತನಾಡುವದಿಲ್ಲ. ಧೈರ್ಯಹಿಡಿ. ತುಸು ನೆಟ್ಟಗಾದ ಕೂಡಲೆ, ನಿನ್ನನ್ನು ಕರೆದುಕೊಂಡುಹೋಗಿ, ವಸಂತರಾಯನ ಭೆಟ್ಟಿ ಮಾಡಿಸುವೆನು, ಎಂದು ಅನ್ನಲು ಅದಕ್ಕೂ ಒಲ್ಲೆನೆನ್ನುವಳು. ಕಡೆಗೆ ಈ ಮಾತಿನ ಬಗ್ಗೆ ಬೇಸರ

ಗೊಂಡು, " ದುಷ್ಟವಾರ್ತೆಯು ಸುಳ್ಳಾಗಲಾರದು, ಮೇಲಾಗಿ ಪತ್ರಬರೆದ ವನಿಗೂ ನನಗೂ ಏನು ವೈರತ್ವವು? ಹೀಗೆ ಸುಳ್ಳು ಬರೆಯಲಿಕ್ಕೆ ಪಾಪ! ಅವನಿಗೇನು ಕಾರಣ? " ಎಂದು ಈ ಮಾತನ್ನೇ ಮುಗಿಸುವಳು.

ಸುಶೀಲಾ—ಸಂಜೀವರಾಯರೇ, ಆ ಪತ್ರ ಬರೆದವನು ಯಾವನಿರ ಬಹುದು? ಅವನು ಪತ್ರದೊಳಗೆ ತನ್ನ ಹೆಸರನ್ನೇಕೆ ಬರೆದಿರಲಿಕ್ಕಿಲ್ಲ?

ಸಂಜೀವ—ಅದೇ ನನಗಾದರೂ ಒಂದು ದೊಡ್ಡ ಗೂಢವಾಗಿರು ವದು. ಪತ್ರದಮೇಲೆ ನಮ್ಮ ಊರಿನ ಮುದ್ರೆಯಿರುವದು. ಅಂದಮೇಲೆ ಅದನ್ನು ಬರೆದವನು ನಮ್ಮ ಊರವನೇ ಇರಲಿಕ್ಕೆಬೇಕು. ಆದರೆ ಅವನಿಗೆ ಗಜರೆಯು ಇಲ್ಲಿ ಇರುವಳೆಂದು ಹ್ಯಾಗೆ ತಿಳಿದಿರಬಹುದು? ಮೊದಲು ಗಜ ರೆಯು ಜೀವದಿಂದಿದ್ದದ್ದೇ ನಮ್ಮ ಮೂವರ ಹೊರ್ತು ಯಾರಿಗೂ ಗೊತ್ತಿಲ್ಲ.

ಸುಶೀಲಾ—ಮೂವರೆಂದರೆ ನಮ್ಮಿಬ್ಬರನ್ನು ಬಿಟ್ಟು ಮತ್ತೆ ಯಾರು?

ಸಂಜೀವ—ಹೀರೆಯೆಂಬವಳೊಬ್ಬಳು ಗಜರೆಯ ದಾಸಿಯಿರುವಳು. ಅವಳಿಗೆ ಗೊತ್ತುಂಟು.

ಸುಶೀಲಾ—ಅವಳು ಎಲ್ಲರಿಗೂ ಹೇಳಿರಬಹುದು.

ಸಂಜೀವ—ಛೇ! ಛೇ! ಹೇಳಬಾರದೆಂದು ಗಜರೆಯು ಆವಳ ಕಡೆ ಯಿಂದ ವಚನತಕ್ಕೊಂಡಿರುವಳು. ಹೀರೆಯು ಕೊಟ್ಟ ವಚನಕ್ಕೆ ತಪ್ಪು ವಂಥವಳಲ್ಲ.

ಸುಶೀಲಾ—ಹಾಗಾದರೆ ಪತ್ರ ಬರೆದವನಿಗೆ ಗಜರಾಬಾಯಿಯು ಇಲ್ಲಿ ಇರುವಳೆಂದು ಹ್ಯಾಗೆ ತಿಳಿದಿದ್ದೀತು?

ಸಂಜೀವ—ಹೇಗೆ ತಿಳಿಯಿತೋ, ಮತ್ತು ಹೀಗೆ ಪತ್ರ ಬರೆಯುವದ ರಲ್ಲಿ ಅವನ ಉದ್ದೇಶವಾದರೂ ಏನಿರುವದೋ! ಪಾಪ, ಒಬ್ಬ ನಿರಪರಾಧಿ ಯಾದ ಹೆಣ್ಣುಮಗಳನ್ನು ಈ ರೀತಿಯಿಂದ ಪೀಡಿಸಿ ಕೊಂದರೆ ಅವನಿಗೆ ಏನು ಬರುವದೋ ನನಗೆ ತಿಳಿಯದು. ಪತ್ರ ಬರೆದ ಮೂರ್ಖನಿಗೆ ಏನೇ ಕಾರಣಗಳಿರಲಿ, ಅಯ್ಯೋ! ಗಜರೆಯನ್ನು ಕೊಂದ ಪಾಪಕ್ಕೆ ಮಾತ್ರ ಗುರಿ ಯಾದನು. ಇರಲಿ, ಸುಶೀಲಾ ಹೋಗು. ಆವಳ ಹತ್ತರ ಯಾರೂ ಇಲ್ಲ. ನಾನು ಬರುವಾಗ ನಿದ್ರೆ ಹತ್ತಿತ್ತು, ಈಗ ಎಚ್ಚರಾಗಿರಬಹುದು ನೋಡು,

ದಿನಾಲು ಬರುವಹಾಗೆ ವೈದ್ಯನು ಇನ್ನೂ ಬರಲಿಲ್ಲ. ನಾನು ಹೋಗಿ ಕರೆದುಕೊಂಡು ಬರುವೆನು. ಹೋಗು ತಡವಾಯಿತು.

ಸುಶೀಲಾ—ಒಳ್ಳೇದು.

(ಇಬ್ಬರೂ ಹೋಗುತ್ತಾರೆ)

---

೩ನೇ ಪ್ರವೇಶ.

(ಸ್ಥಳ—ಗಜರೆಯು ಮಲಗಿದ ಕೋಣೆ.)

(ಗಜರೆಯು ಮಲಗಿರುವಳು ಸುಶೀಲೆಯು ಹತ್ತರ ಕುಳಿತಿರುವಳು)

ಗಜರಾ:- (ಕನಕರಿಸುತ್ತಾಳೆ) ಜರ್‍ರಿ ಹೋಗೋಣ; ಹೋಗೋಣ.

ಸುಶೀಲಾ:- (ಗಾಬರಿಯಾಗಿ) ಅಮ್ಮನವರೇ ಏನು ಕನಕರಿಸುತ್ತೀರಿ ಎಚ್ಚರಾಯಿತೇ?

ಗಜರಾ:- ಯಾರವರು?

ಸುಶೀಲಾ:- ಅಮ್ಮಾ ನಾನು; ಸುಶೀಲೆಯು!

ಗಜರಾ:- ಸುಶೀಲಾ, ನನಗೆ ಇದೇ ಈಗ ಒಂದು ಕನಸು ಬಿದ್ದಂತಾಯಿತು.

ಸುಶೀಲಾ:- ಕನಸಿನಲ್ಲಿ ಏನು ಕಂಡಿರಿ?

ಗಜರಾ:-ನಾನು ಒಬ್ಬ ಬೈರಾಗಿಯ ಕೈ ಹಿಡಿದುಕೊಂಡು ಎಲ್ಲಿಯೋ ಹೋದಹಾಗೆ ಆಗುತ್ತಿತ್ತು. ಆಗ ಸಂಜೀವನೂ ಹೀರೆಯೂ ಓಡುತ್ತಬಂದು "ಗಜರಾ, ಎಲ್ಲಿ ಹೊರಟೆ? ನಾವೂ ಬಂದೆವು ನಿಲ್ಲು" ಎಂದು ಚೀರಿ ಹೇಳಿದರು. ಒಮ್ಮೆಲೇ ಎಚ್ಚರಾಯಿತು.

ಸುಶೀಲಾ:- ಅಮ್ಮನವರೇ ನೀವು ಏನಾದರೂ ಧ್ಯಾನಿಸುತ್ತ ಮಲಗಿಕೊಳ್ಳಬೇಡಿರಿ. ಕೆಟ್ಟ ಕನಸುಗಳು ಬೀಳುವವು. ಈಗಾದರೂ, ಹಿಂದಿನ ಯಾವದೋ ಒಂದು ಸಂಗತಿಯನ್ನು ನೆನಸಿನಲ್ಲಿ ತಂದು, ಮಲಗಿಕೊಂಡಿರಬಹುದು. ಹಾಗೆಂದ್ರಲೇ ಇಂಥ ಕನಸು ಬಿದ್ದಿರುವದು. ಇದರಲ್ಲಿ ಏನೂ ವಿಶೇಷವಿಲ್ಲ.

(ತೆರೆಯಲ್ಲಿ) ರಾವಸಾಹೇಬ,

ಸುಶೀಲಾ:— ಯಾರವರು? (ಹೊರಗೆ ಹೋಗುತ್ತಾಳೆ)

ಗಜರಾ:— (ತನ್ನಷ್ಟಕ್ಕೆ) ಪ್ರಾಣನಾಥರೇ, ಆ ಬೈರಾಗಿಯು ನನ್ನನ್ನು ನೀವಿದ್ದೆಡೆಗೆ ಕರೆದೊಯ್ಯುತ್ತಿದ್ದನಲ್ಲವೇ? ಅಥವಾ, ನೀವೇ ಬೈರಾಗಿಯಾಗಿ ಬಂದಿದ್ದರೂ ಬಂದಿರಬಹುದು. ಏನೇ ಇರಲಿ ಬೇಗನೆ ನಿಮ್ಮನ್ನು ಕೂಡುವೆನೆಂದು ಈ ಕನಸಿನಿಂದ ತಿಳಿಯಬರಲಿಲ್ಲವೇ? ಹಾಗಾದರೆ, ಸಾಯಲಿಕ್ಕೆ ನನಗೆ ಬಲು ಸಂತೋಷ. ಕಣ್ಣುಮುಚ್ಚಿ ನಿಮ್ಮನ್ನೇ ಧ್ಯಾನಿಸುತ್ತ ಮಲಗಿಕೊಳ್ಳುವೆನು. ಮರಣವು ಬೇಗನೆ ಬರಲಿ.

(ಸುಶೀಲೆಯು ಒಳಗೆ ಬರುವಳು)

ಗಜರಾ:— ಸುಶೀಲಾ, ಯಾರು ಬಂದಿದ್ದರು?

ಸುಶೀಲಾ:— ಯಾರಿಲ್ಲ. ಟಪಾಲಿನವನು

ಗಜರಾ:— ನಿನ್ನ ಕೈಯೊಳಗಿರುವದೇನು?

ಸುಶೀಲಾ:— ನಿಮ್ಮದು ಒಂದು ಪತ್ರವು.

ಗಜರಾ:— ಇಲ್ಲಿ ತಾ,

ಸುಶೀಲಾ:— ಇರಲಿ ಓದಿದರೆ ನಿಮ್ಮ ಕಣ್ಣಿಗೆ ತ್ರಾಸವಾದೀತು. ಸಂಜೀವರಾಯರು ಬರಲಿ, ಆ ಮೇಲೆ ಓದಿಸುವಿರಂತೆ.

ಗಜರಾ:— ಇರಲಿ ನನಗೇನು ತ್ರಾಸವಾಗುವದಿಲ್ಲ.

ಸುಶೀಲಾ:— ಅಮ್ಮನವರೇ ನಾನು ಕೈಜೋಡಿಸಿ ಹೇಳಿಕೊಳ್ಳುವೆನು. ನಿಮ್ಮ ಸೂಕ್ಷ್ಮಪ್ರಕೃತಿಗೆ ತ್ರಾಸವಾದೀತು. ನೀವು ಓದಬೇಡಿರಿ. ಸಂಜೀವರಾಯರು ಬಂದು ಓದಲಿ.

ಗಜರಾ:—ಮೊದಲು ಇಲ್ಲಿ ತಾ.

ಸುಶೀಲಾ:—(ತನ್ನಷ್ಟಕ್ಕೆ) ಇನ್ನೇನು ಮಾಡಲಿ? ಕೊಡದಿದ್ದರೆ ತ್ರಾಸಿಗೇಳುವರಲ್ಲ? ಒಳ್ಳೇದು ಕೊಟ್ಟು ಬಿಡುವೆನು.

ಗಜರಾ:—(ತನ್ನಷ್ಟಕ್ಕೆ) ಅಂದಿನ ಪತ್ರದ ಅಕ್ಷರಗಳೂ. ಇದರ ಅಕ್ಷರಗಳೂ ಒಂದೇ ಇರುವವಲ್ಲ? ಒಳ್ಳೇದು ಓದಿನೋಡುವೆನು. (ಓದುತ್ತಾಳೆ ಸಂಪೂರ್ಣ ಓದಿಕೊಂಡು). 'ನಿನ್ನ ಮನೋಹಾರಕ' ಬಹಳವಾಧಿ

ಈತನು, ನನ್ನ ಗಂಡನ ಮಿತ್ರನಾದ ಮನೋಹರನೇ ಇರಲಿಕ್ಕೆ ಬೇಕು. ಎಲಾ! ಮನೋಹರಾ! ನೀನು ಎಂಥ ಮೂರ್ಖನೋ?

(ರಾಗ—ದೇಶ 'ನಿಪಟ ನಿಡರ' ಎಂಬಂತೆ)

ಮೂಢಮತಿಯು ರನ್ನವೆಂದು ಕೆಂಡವ ಪಿಡಿವರೇನೋ ।
ಬೇಡ ಭರದಿಂದಪ್ಪಿಕೊಳ್ಳದಿರು, ಕೋಮಲ ಲತೆಯೆಂದಸಿಯನು ॥ ಪಲ್ಲ ॥

ಖಳ ತಿಳಿಯೋ ನೀ ಮರಣದ ನಿಜ ರೀತಿಯೆನ್ನ ಕಾಂತ ।
ಇಳಿಯು ಬೇಸರಾಗಿ ಬಂದು ವಾಸಿಪನೀ ಹೃದಯದಲಿ ॥ ೧ ॥

ಎಲಾ, ಚಾಂಡಾಲಾ, ನೀಚಾ, ಪಾಪೀ, ಪರಸ್ತ್ರೀಯರನ್ನು ಕೆಟ್ಟ ಬುದ್ಧಿಯಿಂದ ನೋಡುವ ನಿನಗೆ ಯಾವ ಪಾಪವು ತಟ್ಟೀತು? ಎಲಾ, ಅಧಮಾ ನನ್ನ ಗಂಡನು ಜೀವದಿಂದಿದ್ದಾಗ, ನೀನು ಈ ಬಗೆಯ ಮೂಢನಿರುವಿಯೆಂದು ತಿಳಿದಿದ್ದರೆ ನಿನ್ನ ಕುತ್ತಿಗೆಯನ್ನು ಕಡಿದು, ರಕ್ತವನ್ನು ಸುರಿಯುತ್ತಿದ್ದನು. ಹೋಗು ಮೂಢಾ, ಜೀವದಿಂದ ಉಳಿದುಕೊಂಡು ಹೋಗು. ಸಾಯುವವಳನ್ನು ಕೂಡ ದುರ್ದೈವವು ಈ ಪರಿಯಿಂದ ಯಾಕೆ ಕಾಡುತ್ತಿದ್ದೀತು? ದೇವರೇ ಇಷ್ಟು ದಿವಸ ನನ್ನನ್ನು ಯಾಕೆ ಬಳಲಿಸುವಿ? ಬೇಗನೆ ಒಯ್ಯಬಾರದೇ? ಯಮದೂತರುಗಳಿರಾ, ಸ್ವರ್ಗ ಲೋಕದಿಂದ ಇಲ್ಲಿಯವರೆಗೆ ಬಂದು ಸ್ವಲ್ಪವರಲ್ಲಿ ಯಾಕೆ ತಡಮಾಡುವಿರಿ? ಸಾಕು! ಈ ಸಂಸಾರದ ಕಷ್ಟಗಳು ಸಾಕು! ಮರಣವು ಸಮೀಪಿಸಿದಹಾಗೆ ಹೆಚ್ಚಾಗಹತ್ತಿರುವವಲ್ಲ? ಮೊದಲು ಬಂದ ಬೇನೆಯು ಸ್ವಲ್ಪನೆಟ್ಟಗಾದಾಗ, ಸಂಜೀವನು ಊರಿಗೆ ಹೋದನು. ಇಂದು ಬಂದಾನು ನಾಳೆ ಬಂದಾನೆಂದು, ಚಿಂತೆ ಮಾಡುತ್ತಿರಲು ಪತಿಯ ಮರಣದ ವಾರ್ತೆಯು, ಸಿಡಿಲು ಬಡಿದಹಾಗೆ ನನ್ನನ್ನು ನೆಲಕ್ಕೆರಗಿಸಿ, ನನ್ನ ಪ್ರಕೃತಿಯನ್ನು ಛಿನ್ನಭಿನ್ನವಾಗಿ ಮಾಡಿತು. ಆ ಮೇಲೆ, ನಿಶ್ಚಿಂತೆಯಿಂದ ಮರಣದ ಹಾದಿಯನ್ನೇ ನೋಡುತ್ತಿರಲು, ನೀತಿ ಮರ್ಯಾದೆಗಳಿಂದ ರಹಿತರಾದ ವೇಶ್ಯಾಂಗನೆಯರಿಗೂಸಹ ಹೇಸಿಕೆಯನ್ನುಂಟು ಮಾಡುವ ಈ ಪತ್ರವು ಬಂದಿತು. ಇನ್ನೂ ಏನಾಗ ಬೇಕೆಂದು ನನ್ನ ಹಣೆಯಲ್ಲಿ ಬರೆದಿರುವದೋ ಏನೋ! ಅಯ್ಯೋ! ಮುಂದೆ ಬರುವ ಕಷ್ಟಗಳಿಂದ ಪಾರಾಗ ಬೇಕೆನ್ನುವೆನು. ಯಾರಿಗಾದರೂ ಕನಿಕರ ಹುಟ್ಟಿ, ತುಸು ವಿಷವನ್ನಾದರೂ ತಂದು ಕೊಡಬಾರದೇ? ಅಯ್ಯೋ! ನನ್ನನ್ನು ನೋಡಿ ಯಾರಿಗೂ ಅಂತಃಕರಣವು ಬರುವದಿಲ್ಲವೇ! ಸಂಜೀವಾ, ಹೀರಾ, ಸುಶೀಲಾ, ನೀವೆಲ್ಲರೂ ನನ್ನ ಮೇಲೆ ಎಷ್ಟೋ ಉಪಕಾರಗಳನ್ನು

ಮಾಡಿರುವಿರಿ. ಇದೊಂದು ಸಾರೆ ದಯಮಾಡಿ ನನಗೆ ವಿಷಕುಡಿಸಿದರೆ, ನಿಮ್ಮ ಉಪಕಾರಗಳನ್ನು ಜನ್ಮಜನ್ಮಾಂತರದಲ್ಲಿಯೂ ಸ್ಮರಿಸುವೆನು. ಅಥವಾ, ಮಂದಿಗೆ ವಿಷವನ್ನು ತಂದು ಕೊಡೆಂದು ಬೇಡಿದರೆ, ಯಾರು ಕೊಟ್ಟಾರು? ಹಾ! ಈಗ ನೆನಪಾಯಿತು. ನಾನು ಸಂಕಟ ಬಡದೆ ಸಾಯಬೇಕೆಂದು, ಪ್ರಾಣನಾಥರು ಆ ಗುಹೆಯಲ್ಲಿ ವಿಷದ ಬಟ್ಟಲವನ್ನು ಇಟ್ಟು ಹೋಗಿದ್ದರು. ಅದನ್ನು ನನ್ನ ಕೂಡ ತರಲಿಲ್ಲವಲ್ಲ? ಈಗ ನನ್ನ ಹತ್ತರಿದ್ದರೆ, ಎಂಥ ಉಪಯೋಗವಾಗುತ್ತಿತ್ತು! (ಅಳುತ್ತಾಳೆ.)

ಸಂಜೀವಃ—(ಒಳಗೆಬಂದು) ಯಾಕೆ, ಗಜರಾ? ಅಳುವಿಯೇಕೆ? ನಿನ್ನ ವ್ಯಥೆಗಳನ್ನು ನಾನು ತಕ್ಕೊಳ್ಳ ಬಹುದಾಗಿತ್ತೇ!

ಗಜರಾಃ—ಇಲ್ಲ. ನನಗೇನೂ ವ್ಯಥೆಯಾಗುವದಿಲ್ಲ. ನೀನು ಚಿಂತೆ ಮಾಡಬೇಡ.

ಸಂಜೀವ:—ಗಜರಾ, ಅತ್ತು ಅತ್ತು, ನಿನ್ನ ಕಣ್ಣುಗಳು ಕೆಂಪಾಗಿರುವವಲ್ಲ? ಮುಚ್ಚಿಕೊಳ್ಳಬೇಡ. ನನ್ನ ತಂಗೀ, ನಿನಗೆ ಏನಾಗುವದು ಹೇಳು.

ಗಜರಾಃ—ಏನೂ ಇಲ್ಲ.

ಸಂಜೀವಃ—ಇಲ್ಲ. ಏನೋ ಒಂದು ಹಿಂದಿನ ಸಂಗತಿಯನ್ನು ನೆನಪಿಗೆ ತಂದು ಬಹಳಹೊತ್ತು ಅತ್ತ ಹಾಗೆ ತೋರುತ್ತದೆ. (ಸುಶೀಲೆಗೆ) ಸುಶೀಲಾ, ಇವಳು ಏನು ಅನ್ನುತ್ತಿದ್ದಳು?

ಸುಶೀಲಾಃ—ಹಿಂದಿನ ಸಂಗತಿ ಯಾವದೂ ಅಲ್ಲ. ಆವರೆ ಇದೇ ಈಗ ಮತ್ತೊಂದು ಪತ್ರವು ಬಂದಿತು. ಅದನ್ನು ಓದಿಕೊಂಡು ಪುನಃ ಅಂದಿನ ಹಾಗೆ ಅಳಹತ್ತಿದರು.

ಸಂಜೀವಃ—ನೀನು ಅವಳ ಕೈಯ್ಯಲ್ಲಿ ಪತ್ರವನ್ನೇಕೆ ಕೊಟ್ಟೆ?

ಸುಶೀಲಾಃ—ನಾನೇನು ಮಾಡಲಿ? ಕೊಡಬಾರದೆಂದು ಎಷ್ಟು ಪ್ರಯತ್ನ ಮಾಡಿದರೂ ಜುಲುಮೆ ಮಾಡಿ ತಕ್ಕೊಂಡರು.

ಸಂಜೀವಃ—ಈಗ ಆ ಪತ್ರವು ಎಲ್ಲಿರುವದು?

ಸುಶೀಲಾಃ—ಅವರ ಹತ್ತರವೇ ಇರುವದು.

ಸಂಜೀವ—ಗಜರಾ ಪತ್ರವನ್ನು ತಾ; ನೋಡೋಣ.

ಗಜರಾ—ಊಂ ಹೂಂ! ಕೊಡುವದಿಲ್ಲ. ಅದನ್ನು ನೀನು ಓದ ಬಾರದು.

ಸಂಜೀವ—ತಂಗೀ, ನನಗೆ ತಿಳಿಯಬಾರದಾಗಿಪ್ಪ ಸಂಗತಿ ಯಾವ ದು? ನೋಡುವೆನು ತಾ.

ಗಜರಾ—ಊಂ ಹೂಂ! ಅದನ್ನು ನೀನು ಓದಬಾರದು; ನಾನು ಕೊಡುವದಿಲ್ಲ.

ಸಂಜೀವ—ಬಿಡು ಬಿಡು. ತ್ರಾಸಿಗೀಳಬೇಡ; ಕೊಡದಿದ್ದರೂ ಚಿಂತೆ ಯಿಲ್ಲ.

ಗಜರಾ—ಅಣ್ಣಾ, ನೀನು ಇಷ್ಟು ಹೊತ್ತು ಎಲ್ಲಿ ಹೋಗಿದ್ದಿ?

ಸಂಜೀವ—ವೈದ್ಯನ ಮನೆಗೆ ಹೋಗಿದ್ದೆನು. ಅವನು ಇವೇ ಈಗ ಬರುವೆನೆಂದು ಹೇಳಿರುವನು.

ಗಜರಾ—(ತನ್ನಷ್ಟಕ್ಕೆ) ಇನ್ನೇತಕ್ಕೆ ವೈದ್ಯ! (ಪ್ರಕಾಶವಾಗಿ) ಸಂಜೀವಾ, ನನ್ನನ್ನು ಬಿಟ್ಟು ಎಲ್ಲಿಯೂ ಹೋಗಬೇಡ ನನ್ನ ಹತ್ತರವೇ ಕೂಡ್ರು.

ಸಂಜೀವ—ಇಲ್ಲ, ಇನ್ನು ಮುಂದೆ ಎಲ್ಲಿಯೂ ಹೋಗುವದಿಲ್ಲ. ಇಲ್ಲಿ ಯೇ ಕೂಡ್ರುವೆನು. ತಂಗೀ ದಿನದಿನಕ್ಕೆ ಕ್ಷೀಣಳಾಗಹತ್ತಿದಿ. ಹೀಗಾ ದರೆ ನಿನ್ನ ಗತಿಯೇನಾಗಬೇಕು?

ಗಜರಾ—ನನ್ನ ಗತಿಯೇನಾಗುವದು? ಒಂದೆರಡು ದಿವಸಗಳಲ್ಲಿ ಮರಣಹೊಂದುವೆನು.

ಸಂಜೀವ—ಅಯ್ಯೋ! ಇಂಥ ಮಾತುಗಳನ್ನಾಡಿ, ನನ್ನ ಎದೆಯೊಡೆ ಯಬೇಡ. ಗಜರಾ, ನೀನೇ ಹೀಗೆ ನುಡಿದರೆ ನಾನೇನು ಅನ್ನಬೇಕು?

(ಅಳುತ್ತಾನೆ)

ಗಜರಾ—ಯಾಕೆ? ಇಷ್ಟಯಾಕೆ ಶೋಕ? ಅಣ್ಣಾ ನಿಜವಾಗಿ ಹೇಳು. ನಾನು ಸತ್ತರೆ ಈ ಜಗತ್ತಿಗೆ ಏನು ಹಾನಿಯಾಗುವದು? ತಾಯಿ ಗಂತೂ ಎಂದೇ ಕಣ್ಣು ಮರೆಯಾಗಿರುವೆನು. ಮಕ್ಕಳು ಮರಿಗಳಾದರೂ ಯಾರೂ ಇಲ್ಲ. ಅಂದಮೇಲೆ ನಾನು ಸತ್ತರೆ ಮರುಗುವವರಾರು?

ಸಂಜೀವ—ಯಾಕೆ? ನಿನ್ನ ಸಲುವಾಗಿ ಮರುಗುವವರಾರೂ ಇಲ್ಲ ವೇ? ಹಾಗಿದ್ದರೆ, ಇಂದಿಗೆ ನೀನು ಮರಣಹೊಂದಿ ಆರು ತಿಂಗಳುಗಳಾಗು ತ್ತಿದ್ದವು.

ಗಜರಾ—ಹೌದು ಸಂಜೀವಾ, ನನ್ನದು ತಪ್ಪಾಯಿತು. ಕ್ಷಮಿಸು ನೀನೊಬ್ಬನು ಮಾತ್ರ ನನ್ನ ಸಲುವಾಗಿ ಮರುಗುವಿ. ಹೀರಿಯಾದರೂ ಮರುಗುವಳು. ನಿಮ್ಮಿಬ್ಬರ ಉಪಕಾರವನ್ನು ಎಂದೂ ಮರೆಯಲಿಕ್ಕಿಲ್ಲ.

ಸಂಜೀವ—( ಅಳುತ್ತ ) ಹಾಗಾದರೆ ನಮ್ಮಿಬ್ಬರಿಗೆಂದೀಡು ಮಾಡಿ ಹೋಗುವ ಈ ದುಃಖವು ಪ್ರತ್ಯುಪಕಾರವೇನು ?

ಗಜರಾ—ಅದಕ್ಕೆ ನಾನೇನು ಮಾಡಲಿ? ನಾನೇನು ಸಾಯಬೇಕೆಂದು ಇಚ್ಛಿಸುವೆನೇ ? ಸಂಜೀವಾ, ಅಂದು ಆ ಗುಹೆಯಲ್ಲಿ ನನ್ನ ಜೀವವು ನಿನ್ನ ಕೈಯಲ್ಲಿತ್ತು. ಈಗಾದರೂ ಹಾಗೆ ಏನಾದರೂ ಮಾಡಿ, ನನ್ನನ್ನು ಉಳಿಸಿ ಕೊಂಡರೆ ಬೇಡೆನ್ನುವೆನೇ ?

ಸಂಜೀವ—( ತನ್ನಷ್ಟಕ್ಕೆ ) ಅಯ್ಯೋ ! ಇವಳನ್ನು ಬದುಕಿಸುವ ಶಕ್ತಿ ಯನ್ನು ದೇವರು ನನಗೆ ಕೊಡಬಾರದೇ? ಸಂಜೀವನೆಂಬ ಹೆಸರು ನನಗೆ ಅನರ್ಥವಲ್ಲ ! ( ಅಳುತ್ತಾನೆ )

ಸುಶೀಲಾ—ಸಂಜೀವರಾಯರೇ, ವೈದ್ಯರು ಬಂದರು.

ಸಂಜೀವ—ಗಜರಾ, ವೈದ್ಯರು ಬಂದರಂತೆ ಅವರನ್ನು ಒಳಗೆ ಕರೆದು ಕೊಂಡು ಬರುವೆನು.

ಗಜರಾ—ಒಳ್ಳೇದು ಹೋಗು.

( ಸಂಜೀವನು ಹೋಗಿ ವೈದ್ಯನನ್ನು ಕರೆದುಕೊಂಡು ಬರುತ್ತಾನೆ )

ವೈದ್ಯ—( ನೋಡಿ ) ಒಳ್ಳೇದು. ಈ ಹೊತ್ತಿನ ಔಷಧವನ್ನು ಕೊಟ್ಟಿ ರುವಿರಷ್ಟೇ ?

ಸಂಜೀವ—ಹೌದು ಕೊಟ್ಟಿರುವೆವು.

ವೈದ್ಯ—ಇದೇ ಈಗ ಮತ್ತೊಂದು ಔಷಧ ಕೊಟ್ಟು ಕಳುಹುವೆನು. ಅದನ್ನು ತಾಸುತಾಸಿಗೆ ಕೊಡಿರಿ.

ಸಂಜೀವ—ಯಾಕಾಗವೊಲ್ಲದು. ( ಇಬ್ಬರೂ ತುಸು ಮುಂದಕ್ಕೆ ಬರುತ್ತಾರೆ. ) ವೈದ್ಯರೇ, ನಿಜವಾಗಿ ಹೇಳಿರಿ. ನನ್ನ ತಂಗಿಯು ಬದುಕು ವಳೋ ಇಲ್ಲವೋ ?

ವೈದ್ಯ—ಸಂಜೀವರಾವ, ನಮ್ಮೆಲ್ಲರ ಪ್ರಯತ್ನಗಳೆಲ್ಲ ವ್ಯರ್ಥವಾದವು. ಇವಳೇನು ಇನ್ನು ಬಹು ಹೊತ್ತು ಬದುಕಲಿಕ್ಕಿಲ್ಲ. ಬಹಳವಾದರೆ, ಇನ್ನೊಂದು ದಿವಸ ಜೀವದಿಂದಿದ್ದಾಳು.

ಸಂಜೀವ—ವೈದ್ಯರೇ, ನೀವೇ ಹೀಗೆ ಹೇಳಿದಮೇಲೆ, ಮನುಷ್ಯನು ಮಾಡತಕ್ಕ ಉಪಾಯಗಳೆಲ್ಲ ತೀರಿದಂತಾದವು.

ವೈದ್ಯ—ಅವಕ್ಕಿನ್ನೇನು ಮಾಡುವದದೆ? ನಾನಾದರೂ ಕೈಯ್ಯಿಂದಾದಷ್ಟು ಪ್ರಯತ್ನಮಾಡಿದೆನು. ಆದರೆ ಒಮ್ಮೆ ಹತ್ತಿದ ಹೃದ್ರೋಗವು ಕಡೆಯವರೆಗೆ ಬಿಡಲೇ ಇಲ್ಲ. ನಡುವೆ ಸ್ವಲ್ಪ ನೆಟ್ಟಗಾಗಿತ್ತು. ಆದರೆ ಒಮ್ಮಿಂದೊಮ್ಮೆಲೇ ಪುನಃ ಹೆಚ್ಚಾಯಿತು. ತಿರುಗಿಬಂದಬೇನೆಯು ಬಹುತರವಾಗಿ ಯಾವದೂ ನೆಟ್ಟಗಾಗುವದಿಲ್ಲ. ಇತ್ತಿತ್ತಲಾಗಿ ಮಾನಸಿಕ ಶಾರೀರಿಕ ವ್ಯಥೆಗಳೆರಡೂ ಕೂಡಿದವು.

ಸಂಜೀವ—ಏನಾಯಿತೋ ಆಯಿತು. ಇನ್ನು ಮಾತ್ರ ಆಕೆಯು ಬದುಕ್ಯಾಳೆಂಬ ಆಶೆಯನ್ನು ಬಿಟ್ಟೆನು.

ವೈದ್ಯ—ನೀವು ವ್ಯರ್ಥವಾಗಿ ಚಿಂತಿಸಬೇಡಿರಿ. ಹೋಗಿರಿ. ನಾನು ಬೇಗನೆ ಔಷಧವನ್ನು ಕಳಿಸಿಕೊಡುವೆನು. ( ಹೋಗುತ್ತಾನೆ )

ಗಜರಾ—ಸಂಜೀವಾ, ವೈದ್ಯನು ಏನು ಹೇಳಿದನು.

ಸಂಜೀವ—(ಅಳುತ್ತ) ನೆಟ್ಟಗೆ ಮಾಡುವನಂತೆ ಏನೂ ಅಂಜಬೇಡ. ( ಗಜರೆಯು ಸಂಜೀವನನ್ನು ಒಂದೇಸವನೆ ನೋಡುತ್ತಾಳೆ ) ಯಾಕೆ? ಹೀಗೆ ಯಾಕೆ ನೋಡುವಿ?

ಗಜರಾ—ನನ್ನ ಸುತ್ತಲೂ ಎಲ್ಲವೂ ತಿರುಗಿದ ಹಾಗಾಗುವದು.

ಸಂಜೀವ—ಕಣ್ಣುಮುಚ್ಚಿ ಸುಮ್ಮನೇ ಮಲಗಿಕೋ, ಅಂದರೆ ಹಾಗಾಗುವದಿಲ್ಲ. ( ಗಜರೆಯು ಹಾಗೇ ಮಾಡುತ್ತಾಳೆ )

ಗಜರಾ—( ಒಮ್ಮೆಲೇ ಎದ್ದು ) ಹೀರಾ, ನೋಡೇ, ವಿಜಯನಗರಕ್ಕೆ ನನ್ನನ್ನು ಕರೆದುಕೊಂಡು ಹೋಗುವದಿಲ್ಲವಂತೆ.

ಸಂಜೀವ—ಗಜರಾ, ಯಾಕೆ, ಹೀಗೆ ಯಾಕೆ ಮಾತಾಡುವಿ? ಹೀರೆಯೆಲ್ಲಿರುವಳು?

ಗಜರಾ—ನಾನೂ ಬಿಡುವದಿಲ್ಲ. ಅವರು ಬಿಟ್ಟು ಹೋದರೂ ನಾನೊಬ್ಬಳೇ ಹೋಗುವೆನು. ನೀನೂ ಬರುವಿಯೋ ಇಲ್ಲವೋ?

ಸಂಜೀವ—ಸುಶೀಲಾ, ಬೇಗಬಾ. ಇವಳಿಗೆ ಎಚ್ಚರದಪ್ಪಿತು. ಇದೇ ಈಗ ಸುತ್ತಲೂ ತಿರುಗಿದಂತಾಗುವದು ಎಂದು ಅಂದಳು.

ಸುಶೀಲಾ—ಅಮ್ಮನವರೇ ಹೀಗೆ ಯಾಕೆ ಮಾತಾಡುವಿರಿ? ನನ್ನ ಗುರ್ತು ಹತ್ತುವದೋ ಇಲ್ಲವೋ? ನಾನು ಯಾರು?

ಗಜರಾ—ನನಗೆ ನಿನ್ನ ಗುರ್ತು ಇಲ್ಲವೇನು?

ಸುಶೀಲಾ—ಹಾಗಾದರೆ ನನ್ನ ಹೆಸರೇನು? ಹೇಳಿರಿ.

ಗಜರಾ—ನಿನ್ನ ಹೆಸರು ಹೀರಾ.

ಸಂಜೀವ—( ಅಳುತ್ತ ) ಸುಶೀಲಾ, ತೀರಿದಹಾಗಾಯಿತು. ನಾನು ಮಾಡಿದ್ದೆಲ್ಲಾ ವ್ಯರ್ಥವಾಯಿತು. ಸ್ವಲ್ಪ ಹೊತ್ತಿನಲ್ಲಿ ಗಜರೆಯು ಇದ್ದಳೋ ಇಲ್ಲವೋ ಎನ್ನುವಹಾಗಾಗುವದು.

ಗಜರಾ—ಅಯ್ಯ! ನಾನೆಂಥ ಹುಚ್ಚಿ! ಸುಶೀಲೆಗೆ ಹೀರೆಯೆನ್ನುವೆನು!

( ಬಹಳ ಹೊತ್ತು ನಗುತ್ತಾಳೆ )

ಸಂಜೀವ—ತಂಗೀ ಹೀಗೆ ನಗಬಾರದವ್ವ. ಸುಮ್ಮನೆ ಮಲಗಿಕೋ.

ಗಜರಾ—ಹಾಗಾದರೆ ನೀನು ಅಳುವಿಯೇಕೆ?

ಸಂಜೀವ—ಮತ್ತೇನು ಮಾಡಲಿ, ನೀನು ಹೀಗೆ ಹುಚ್ಚಿಯಹಾಗೆ ಮಾಡಿದರೆ?

ಸುಶೀಲಾ—ಅಮ್ಮನವರೇ, ಸುಮ್ಮನೆ ಮಲಗಿಕೊಳ್ಳಿರಿ.

( ಗಜರೆಯು ಮಲಗಿಕೊಳ್ಳುತ್ತಾಳೆ )

ಗಜರಾ ( ಎದ್ದು )—ನೀನು ಯಾರು? ಸಂಜೀವನಲ್ಲವೇ?

ಸಂಜೀವ—ಹೌದು.

ಗಜರಾ—ಸಂಜೀವಾ, ಹೋಗು.

ಸಂಜೀವ—ಎಲ್ಲಿಗೆ ಹೋಗಲಿ?

ಗಜರಾ—' ಆ ಪತ್ರದಲ್ಲಿ ಬರೆದದ್ದು ಸುಳ್ಳು ನಾನು ಪ್ರತ್ಯಕ್ಷವಾಗಿ ನೋಡಿರುವೆನು ' ಎಂದು ಹೇಳಿದಿ. ಈಗ ಕರೆತಂದು ತೋರಿಸು.

ಸಂಜೀವ—ಯಾರನ್ನು?

ಗಜರಾ—ಪ್ರಾಣನಾಥರನ್ನು.

ಸಂಜೀವ—( ಅಳುತ್ತ, ತನ್ನಷ್ಟಕ್ಕೆ ) ಆಹಾ! ಸಾಯುವ ಕ್ಷಣಕ್ಕೆ ಸಹ ಪತಿಯನ್ನು ನೆನೆಯುವಿಯಾ? ಧನ್ಯಳು! ಗಜರಾ, ನೀನೇ ಧನ್ಯಳು!! ನೀನೇ ಪತಿವ್ರತೆಯು!!! ನೀನೇ ಆರ್ಯಮಹಿಳೆಯು.

ಗಜರಾ—ಯಾಕೆ? ಸುಮ್ಮನೆ ಕುಳಿತಿ? ತಂದುತೋರಿಸು.

ಸಂಜೀವ—ಒಳ್ಳೇದು ಇದೇ ಈಗ ತಂದು ತೋರಿಸುವೆನು.

ಗಜರಾ—( ಸುಶೀಲೆಗೆ ಕೈಮಾಡಿ ) ಹೋಗು ತಂದುತೋರಿಸು.

ಸಂಜೀವ—ಹಾಗಾದರೆ, ಊರಿಗೆ ಹೋಗಿ ವಸಂತನನ್ನು ಕರೆತರುವೆನು. ಹೋಗಲ್ಯಾ? ( ಏಳುತ್ತಾನೆ )

ಗಜರಾ—ನೀನು ಇಲ್ಲಿಯೇ ಕೂಡ್ರು. ನನ್ನನ್ನು ಬಿಟ್ಟು ಹೋಗಬೇಡ.

ಸಂಜೀವ—ಹಾಗಾದರೆ ತುಸು ನೆಟ್ಟಗಾಗಲಿ. ನಾವು ಇಬ್ಬರೂ ಹೋಗೋಣ.

ಗಜರಾ—ನಾನು ಬರುವದಿಲ್ಲ, ಹಿಂದಿನ ಎಲ್ಲ ಸಂಗತಿಯೂ ಜನರಿಗೆ ಗೊತ್ತಾದೀತು.

ಸಂಜೀವ—ಹಾಗಾದರೆ ನಾನೊಬ್ಬನೇ ಹೋಗುವೆನು.

ಗಜರಾ—ನೀನು ಹೋಗಬೇಡ; ನನ್ನನ್ನು ಬಿಟ್ಟು ಹೋಗಬೇಡ.

ಸಂಜೀವ—ಗಜರಾ, ಹೋಗಬೇಡೆಂದೂ ನೀನೇ ಅನ್ನುವಿ; ತಂದು ತೋರಿಸೆಂದೂ ನೀನೇ ಅನ್ನುವಿ; ನಾನು ಎರಡೂ ಒಮ್ಮೆಲೇ ಹ್ಯಾಗೆ ಮಾಡೇನು?

ಗಜರಾ—ತಂದುತೋರಿಸೋ; ಸಂಜೀವಾ, ಪ್ರಾಣನಾಥರನ್ನು ತಂದುತೋರಿಸೋ! (ಅಳುತ್ತಾಳೆ)

ಸುಶೀಲಾ—ಸಂಜೀವರಾಯರೇ, ಸಾಯುವ ಸಂಕಟಕ್ಕೆ ಬಾಯಿಗೆ ಬಂದಂತೆ ಬಡಬಡಿಸುತ್ತಾರೆ. ಹೆಚ್ಚಿಗೆ ಮಾತಾಡಿಸಿ ಅವರಿಗೆ ಪುನಃ ತ್ರಾಸ ಕೊಡಬೇಡಿರಿ.

ಸಂಜೀವ—(ಅಳುತ್ತ) ಸುಶೀಲಾ, ದೇವರು ನನಗೆ ಈ ಅನಿಮಿತ್ತ ಭಗಿನಿಯನ್ನು ಎಲ್ಲಿಂದ ಗಂಟುಹಾಕಿದ್ದಾನು. ಅಯ್ಯೋ! ಇವಳು, ಅಂದೇ ವಿಜಯವಿಠ್ಠಲನ ಗುಹೆಯಲ್ಲಿ ಸತ್ತು ಹೋಗಬಾರದಾಗಿತ್ತೇ? ಹಾಗಾಗಿದ್ದರೆ ಇಂದಿಗೆ ಗಜರೆಯು ಮರೆತು ಹೋಗಿ, ಆರು ತಿಂಗಳುಗಳಾಗುತ್ತಿದ್ದವು. ನಾನು ಯಾಕೆ ಇವಳನ್ನು ಗುಹೆಯ ಹೊರಗೆ ತಂದಿದ್ದೇನು? ಅಥವಾ ಅಂದು ಹೀರೆಯು ಯಾಕೆ ನನ್ನನ್ನು ಕರೆದುಕೊಂಡು ಹೋಗಿದ್ದಾಳು? ಹೀರಾ, ನೀನು ಸುಪ್ರೈವಿಯು. ಗಜರೆಯು ಸಂಜೀವನಕೂಡ ಕ್ಷೇಮದಿಂದ ಇರುವಳೆಂದು ತಿಳಿದು. ನೀನು ನಿಶ್ಚಿಂತೆಯಿಂದಿರುವಿ? ನಾನು ಮಾತ್ರ ದಿನದಿನಕ್ಕೆ ಕ್ಷೀಣವಾಗುವ ಈ ರೋಗಿಯನ್ನು ಮುಂದಿಟ್ಟುಕೊಂಡು, ಯಾವಾಗಲೂ ಅಳಬೇಕಾಗುವದು. ಇದರ ಬಳಲಿಕೆಯ ಆರ್ತಸ್ವರದ ಹೊರ್ತು ಮತ್ತೊಂದು ಕೇಳಬರುವದಿಲ್ಲ. ಇದರ ನಿಸ್ತೇಜವಾದ ಮುಖದ ಹೊರ್ತು ಮತ್ತೊಂದು ವಸ್ತುವು ಕಣ್ಣಿಗೆ ಬೀಳುವದಿಲ್ಲ. ಈಗ ಪ್ರಾಣ ಹೋಗುವದೋ, ಇನ್ನೊಂದುಗಳಿಗೆಗೆ ಪ್ರಾಣಹೋಗುವದೋ, ಎಂಬ ಸಂಶಯದಲ್ಲಿ ಕೂಳು ನೀರುಗಳ ಪರಿವೆಯು ಸಹ ಉಳಿಯುವದಿಲ್ಲ. ಅಯ್ಯೋ! ಇಂಥ ರೋಗಿಯು ಅನುಭವಿಸುವ ಯಾತನೆಯನ್ನಂತೂ ನೋಡಲಾಸಲ್ಲ. ಒಂದುವೇಳೆ ಸ್ವತಃ ಅನುಭವಿಸಬಹುದು; ನೋಡುವದು ಮಾತ್ರ ಬಲು ಕಷ್ಟ.

ಸುಶೀಲಾ—ಇಂಥ ಸ್ಥಿತಿಯು ಯಾರನ್ನೂ ಬಿಟ್ಟಿಲ್ಲ. ನಾವಾದರೂ ಸಾಯುವಾಗ ಇವೇ ವೇದನೆಗಳನ್ನು ಅನುಭವಿಸಬೇಕಾಗುವದು. ಆ ಹೊತ್ತಿಗೆ ನಮ್ಮ ಆಪ್ತೇಷ್ಟರಿಗೂ, ಸಮೀಪದಲ್ಲಿರುವವರಿಗೂ ಈಗ ನಮಗಾಗುವ ದುಃಖಗಳೆಲ್ಲವೂ ಆಗುವವು.

ಸಂಜೀವ—ಸುಶೀಲಾ, ಇವಳು ಇನ್ನು ಬದುಕುವದಿಲ್ಲ. ಇದೊಂದು ನನ್ನ ಮೇಲೆ, ದೊಡ್ಡ ಅಪಕೀರ್ತಿಯು ಬಂದಿತು. ನಾನು ಇವಳನ್ನು ಇಲ್ಲಿಗೆ ಕರೆದುಕೊಂಡು ಬರಬಾರದಾಗಿತ್ತು.

ಸುಶೀಲಾ—ಛೀ! ಅಪಕೀರ್ತಿ ಬರಲಿಕ್ಕೆ ನೀವು ಕೊಂದಿರಾ! ಅವಳ ಆಯುಷ್ಯವೇ ತೀರಿರುವದು ಇದರೊಳಗೆ ಯಾರು ಮಾಡುವದೇನು?

ಗಜರಾ—ಯಾಕೋ? ಸಂಜೀವಾ, ನಾಥರನ್ನು ತಂದು ತೋರಿಸೋ! ( ಅಳುತ್ತಾಳೆ )

ಸಂಜೀವ—ಛೀ! ನಾನು ನೋಡಲಾರೆನು. ( ಹೋಗುತ್ತಾನೆ )

ಸುಶೀಲಾ—ಅಮ್ಮನವರೇ, ನೋಡಿರಿ. ನೀವು ಹೀಗೆ ಮಾಡುವದನ್ನು ಕಂಡು, ಸಂಜೀವರಾಯರು ಎದ್ದು ಹೋದರು. ಸುಮ್ಮನೆ ಮಲಗಿಕೊಳ್ಳಿರಿ. ಹಾಗೆ ಮಾತಾಡಬಾರದು.

( ತೆರೆಯು ಬೀಳುತ್ತದೆ )

---

### ೪ನೇ ಪ್ರವೇಶ.

( ಸ್ಥಳ:—ಸಂಜೀವನ ಮನೆಯಮುಂದಿನ ರಸ್ತೆ )

( ಬೈರಾಗಿಗಳಾದ ವಸಂತನೂ ಹೀರೆಯೂ ಬರುತ್ತಾರೆ )

ಬೈರಾಗಿಗಳು—

( ' ರಾಧಾಧರ ಮಧುವಿಂದ ' ಎಂಬಂತೆ

ಭವಭಯಹರಜಗದೀಶ ಜಯಜಯ !
ಭವಾನೀಪತೇ, ಶರ್ವ ಜಯಜಯ || ಪಲ್ಲ ||

ಗಂಗಾಶೀಕರಕ್ಲಿನ್ನ ಜಟಾಧರ ।
ಬಸ್ಮಧವಲಬಾಲಚಂದ್ರಶೇಖರ ॥ ೧ ॥

( ತೆರೆಯಲ್ಲಿ )

ಸುಶೀಲಾ, ಹೊರಗೆ ಯಾರು ಬಂದಿರುವರು ನೋಡು.

( ಸುಶೀಲೆಯು ನೋಡಿ ಹೋಗುತ್ತಾಳೆ )

( ತೆರೆಯಲ್ಲಿ )

ಯಾರೋ ಭಿಕ್ಷುಕರು.

ಸುಶೀಲಾ—( ಒಳಗೆಬಂದು ) ಮುಂದೆ ಹೋಗಿರಿ.

( ವೈರಾಗಿಗಳು ' ನಾವಮಾಡಿದಕರ್ಮ ' ಎಂಬ ಪುರಂದರದಾಸನ ಪದವನ್ನು ಹಾಡುತ್ತ ಮುಂದೆ ನಡೆಯುತ್ತಾರೆ )

( ತೆರೆಯಲ್ಲಿ )

ಸುಶೀಲಾ, ಅವರನ್ನು ಹಾಗೇ ಯಾಕೆ ಕಳುಹಿದಿ? ಇಕೋ, ಈ ಉಂಗುರವನ್ನು ಭಿಕ್ಷೆಹಾಕಿಬಾ ಹೋಗು. ನನ್ನ ವಸ್ತ್ರಒಡವೆಗಳನ್ನೆಲ್ಲಾ ದಾನ ಮಾಡುವೆನು.

ಸುಶೀಲಾ— ( ಒಳಗೆಬಂದು ) ಸ್ವಾಮೀ, ತುಸು ನಿಲ್ಲಿರಿ. ನಮ್ಮ ಯಜಮಾನಳು ಈ ಉಂಗುರವನ್ನು ನಿಮಗೆ ಕೊಟ್ಟಿರುವಳು. ಇದನ್ನು ತಕ್ಕೊಳ್ಳಿರಿ. ಆಶೀರ್ವಾದಮಾಡಿರಿ. ( ತನ್ನಷ್ಟಕ್ಕೆ ) ಯಾರಪುಣ್ಯದಿಂದಾದರೂ ಬಡಪ್ರಾಣಿ ಬದುಕಲಿ. ( ಉಂಗುರವನ್ನು ವಸಂತನ ಕೈಯ್ಯಲ್ಲಿ ಕೊಟ್ಟು ಹೋಗುತ್ತಾಳೆ )

ವಸಂತ—( ಉಂಗುರವನ್ನು ನೋಡಿ ) ಆಹಾ ! ಇದು, ನಾನು ಗಜರೆಗೆ ಕೊಟ್ಟಿದ್ದ ಉಂಗುರವು. ಗಜರಾ, ಗಜರಾ, ಎಲ್ಲಿರುವಿ ? (ಅಳುತ್ತಾನೆ )

ಹೀರಾ—ಸ್ವಾಮೀ' ಇನ್ನೆಲ್ಲಿಯ ಗಜರೆಯು ? ವೈರಾಗಿಗೆ ಯಾವ ಗಜರೆಯು ? ನಡೆಯಿರಿ, ಉಂಗುರವನ್ನು ತಿರುಗಿಕೊಟ್ಟು. ಅನುಷ್ಠಾನಕ್ಕೆ ತಡವಾಗುವದು.

ವಸಂತ—ಹೀರಾ, ಇದು ನನ್ನ ಉಂಗುರವು. ವಿಜಯನಗರಕ್ಕೆ ಹೋದಾಗ, ಗಜರೆಯು ನನ್ನ ಕೈಯೊಳಗಿಂದ ತಕ್ಕೊಂಡಿದ್ದಳು.

ಹೀರಾ—[ ತನ್ನಷ್ಟಕ್ಕೆ ] ಹೌದು. ಈ ಉಂಗುರದ ಗುರುತು, ನನಗಾದರೂ ಹತ್ತುವದು. ಆದರೆ ಇನ್ನು ಸ್ವಲ್ಪಹೊತ್ತು ಇವರನ್ನು ಭ್ರಮೆಗೊಳಿಸುವೆನು. ( ಪ್ರಕಾಶವಾಗಿ ) ಸ್ವಾಮೀ, ನೀವು ಪೂರ್ವಜನ್ಮದೊಳಗಿನ ಯಾವದೋ ಒಂದು ಕಥೆಯನ್ನು ಸ್ಮರಿಸಿ, ' ನನ್ನ ಉಂಗುರ, ನನ್ನ ಗಜರಾ,' ಎಂದು ಅನ್ನುವಿರಿ. ಆದರೆ ವೈರಾಗ್ಯವನ್ನು ತಾಳಿದವರಿಗೆ ಯಾವದು ತಮ್ಮದು ? ಅದ್ದರಿಂದ ಅದನ್ನು ಕೊಟ್ಟು ಬಿಡಿರಿ. ಜೀವಧಾರಣದ ನಿಮಿತ್ತವಾಗಿ,

ಹಾಕಿದರೆ ತಾನು ಭಿಕ್ಷೆಯನ್ನು ಹಾಕಲಿ. ಇಲ್ಲದಿದ್ದರೆ ಬಿಟ್ಟು ಬಿಡಲಿ. [ ಹೀಗೆಂದು ಉಂಗುರವನ್ನು ಕಸಿದೊಗೆಯಲಿಕ್ಕೆ ಹೋಗುತ್ತಾಳೆ. ]

ವಸಂತ—ಈ ಉಂಗುರವನ್ನು ಕೊಟ್ಟವಳು ಎಲ್ಲಿ ಹೋದಳು? ಇದೇ ಮನೆಯಲ್ಲಿ ಹೋದವಳಲ್ಲವೇ? ಗಜರೆಯು ಇಲ್ಲಿಯೇ ಇರಬಹುದು. [ಆ ಮನೆಯ ಕಡೆಗೆ ಹೋಗುತ್ತಾನೆ. ]

ಹೀರಾ—[ ಕೈಹಿಡಿದು ] ಛೀ! ಸ್ವಾಮೀ, ನೀವು ಬೈರಾಗಿಗಳು, ಭಿಕ್ಷುಕರು. ಒಮ್ಮೆಲೇ ಹಾಗೆ ಮಂದಿಯ ಮನೆಯೊಳಗೆ ಹೋಗಬಾರದು. ಬನ್ನಿರಿ. ಆ ಉಂಗುರವನ್ನು ಅಲ್ಲಿಯೇ ಒಗೆದು ಬಿಡಿರಿ.

ಸುಶೀಲಾ—( ಒಳಗೆಬಂದು ) ಮಹಾಸ್ವಾಮಿಯವರೇ, ನಮ್ಮ ಯಜಮಾನಳು ತಮ್ಮಿಬ್ಬರ ದರ್ಶನಲಾಭವನ್ನು ಇಚ್ಛಿಸುವಳು. ದಯಮಾಡಿ ಬರಬೇಕು

ಹೀರಾ—ನಾನು ಇಷ್ಟು ದಿವಸಗಳವರೆಗೆ. ಮಾಡಿದ ಪ್ರಯತ್ನಗಳೆಲ್ಲ ಸಫಲವಾಗಲಿಕ್ಕೆ ಬಂದಿವೆ. ಸ್ವಲ್ಪ ಹೊತ್ತಿನಲ್ಲಿ ವಸಂತರಾಯರಿಗೂ, ಗಜರಾಬಾಯಿಗೂ ಪುನಃ ಬೆಟ್ಟಿಯಾಗುವದು.

[ ಎಲ್ಲರೂ ಹೋಗುತ್ತಾರೆ ]

---

### ೫ ನೇ ಪ್ರವೇಶ.

[ ಸ್ಥಳ—ಗಜರೆಯು ಮಲಗಿದಕೋಣೆ ]

[ ಗಜರೆಯು ಸುಶೀಲೆಯೂ ಇರುತ್ತಾರೆ ]

ಗಜರಾ—ಸುಶೀಲಾ, ಆ ಮಹಾತ್ಮರು ಒಳಗೆ ಬಂದರೇನು?

ಸುಶೀಲಾ—ಬಂದರು. [ವಸಂತನೂ ಹೀರಿಯೂ ಒಳಗೆಬರುತ್ತಾರೆ]

ವಸಂತ—( ತನ್ನಷ್ಟಕ್ಕೆ ) ಅಯ್ಯೋ! ಇವಳೇ ನನ್ನ ಗಜರೆಯು. ಎಷ್ಟು ಕ್ಷೀಣಳಾಗಿರುವಳಲ್ಲ!

ಗಜರಾ—ಸ್ವಾಮೀ ಇತ್ತ ಬನ್ನಿರಿ.

ವಸಂತ—ಗಜರಾ, ನಾನು ಸ್ವಾಮಿಯಲ್ಲ. ನಿನ್ನ ಸೇವಕನಾದ ವಸಂತನು

ಗಜರಾ—ಅಯ್ಯೋ! ಇವರು ನನ್ನ ಪ್ರಾಣನಾಥರಲ್ಲವೇ? ಪ್ರಾಣನಾಥರೇ, ನೀವು ಇನ್ನೂ ಬದುಕಿದಿರಾ! ( ಇಬ್ಬರೂ ಅಪ್ಪಿಕೊಂಡು ಅಳುತ್ತಾರೆ. )

ವಸಂತ—ಇರಲಿ. ಇರಲಿ. ಅಳಬೇಡ, ಅಳಬೇಡ.

ಸುಶೀಲಾಃ—( ತನ್ನಷ್ಟಕ್ಕೆ ) ಇವರು ಯಾರಿರಬಹುದು ? ವಸಂತ ರಾಯರೇ ಬೈರಾಗಿಯಾಗಿ ಬಂದಿರಬಹುದೇನು? ಹೀರೆಯೆಂದರೆ ಇವಳೇ ಇರಬಹುದಲ್ಲವೇ ?

ವಸಂತಃ—( ಕೈಜೋಡಿಸಿ ) ಪ್ರಿಯೇ, ನನ್ನನ್ನು ಕ್ಷಮಿಸು, ತಪ್ಪಾಯಿತು, ನಿನ್ನ ಮೇಲಿನ ಸಿಟ್ಟೆಲ್ಲಾ, ಈಗ ಶಾಂತ ವಾಗಿರುವದು. ನಿನ್ನನ್ನು ಧಿಕ್ಕರಿಸಿ, ಅಂದು ವಿಜಯವಿಠ್ಠಲನ ಗುಹೆಯೊಳಗೆ ಒಗೆದು ಬಂದದ್ದರ ಸಲುವಾಗಿ, ನಿನಗಾಗಿದ್ದ ವಿಷಾದವೆಲ್ಲವೂ ಈಗ ಅಳಿದು ಹೋಗಲಿ. ನನ್ನ ಮೇಲೆ ದಯವಮಾಡು.

ಗಜರಾಃ—ಪ್ರಾಣನಾಥರೇ, ನಿಮ್ಮದೇನೂ ತಪ್ಪಿಲ್ಲ. ಇದೆಲ್ಲಾ ನನ್ನ ದುರ್ದೈವದ ಕುಚೇಷ್ಟೆಯು. ಪ್ರಾಣನಾಥರೇ, ನಾನು ಇಲ್ಲಿರುವೆನೆಂದು ಈಗ ನಿಮಗೆ ಹ್ಯಾಗೆ ತಿಳಿಯಿತು ?

ವಸಂತಃ—ಹೇಳುವೆನು. ಮೊದಲು ನನ್ನ ಪಶ್ಚಾತ್ತಾಪವೆಲ್ಲ ನೊಂದಿ ಹೋಗಲಿ. ಬೇರುಹರಿದ ಬಳ್ಳಿಯುಹಾಗೆ ಮೂರ್ಛೆಬಂದು ನೆಲಕ್ಕೆ ಬಿದ್ದ, ನಿನ್ನ ಕೋಮಲ ತನುವನ್ನು ಧಿಕ್ಕರಿಸಿ, ಅಂದು ಆ ಗುಹೆಯೊಳಗೆ ಚಲ್ಲಿ ಕೊಟ್ಟುಬಂದೆನು. ಅದನ್ನು ಈಗ ಬಿಗಿದಪ್ಪಿಕೊಂಡು ನನ್ನ ಸಂತಾಪವನ್ನೆಲ್ಲ ಕಳೆದು ಕೊಳ್ಳುವೆನು. ಬಾ, ಪ್ರಿಯೇ, ನನ್ನನ್ನು ಆಲಿಂಗಿಸು. ( ಗಜರೆಯನ್ನು ಅಪ್ಪಿಕೊಳ್ಳುತ್ತಾನೆ. )

ಗಜರಾಃ—ಪ್ರಾಣನಾಥಾ ನೀವು ಬೈರಾಗಿಯ ವೇಷವನ್ನು ಯಾಕೆ ಧರಿಸಿದಿರಿ ?

ವಸಂತಃ—ಹಿಂದಿನದೆಲ್ಲವೂ ನೆನಪಾಗಿ ನನಗೆ ದುಃಖದಿಂದ ನಾಲಿಗೆ ಯೇಳಲೊಲ್ಲದು. ಹೀರೆಯನ್ನು ಕೇಳು.

ಗಜರಾಃ—ಹೀರೆಯೂ ಬಂದಿರುವಳೇನು ?

ಹೀರಾಃ—ಹೌದು; ಅಮ್ಮನವರೇ, ನಾನೂ ಬಂದಿರುವೆನು.

ಸುಶೀಲಾಃ—( ತನ್ನಷ್ಟಕ್ಕೆ ) ಇದೆಲ್ಲವೂ ಏನಿರಬಹುದು ? ಒಳ್ಳೇದು ಸಂಜೀವರಾಯರನ್ನು ಕರೆತರುವೆನು. ( ಹೋಗುತ್ತಾಳೆ. )

ಗಜರಾಃ—ಹೀರಾ, ಬಾ. ನನ್ನನ್ನು ಅಪ್ಪಿಕೋ.

ಹೀರಾಃ—( ಅಪ್ಪಿಕೊಂಡು ) ಅಮ್ಮನವರೇ ನೀವು ಎಷ್ಟು ಸೊರಗಿರುವಿರಲ್ಲ !

ಗಜರಾ:—ಹೀರಾ, ಇದೇ ನನ್ನ ಕಡೆಯ ಆಲಿಂಗನವು. (ತಳು ತ್ತಾಳೆ.)

ಹೀರಾ:—ಅಮ್ಮನವರೇ, ಯಾಕೆ? ಹೀಗೆ ಯಾಕೆ ಅನ್ನುವಿರಿ?

ಗಜರಾ:—ಇದು ನನ್ನ ಸಾಯುವ ಕ್ಷಣವು. ಇಷ್ಟರಲ್ಲಿಯೇ ನೀವೆ ಲ್ಲರೂ ಬಂದು ನನಗೆ ಭೆಟ್ಟಿಯನ್ನು ಕೊಟ್ಟಿರಿ; ಇದೇ ನನ್ನ ದೊಡ್ಡ ಪುಣ್ಯವು.

ಹೀರಾ:—ಅಯ್ಯೋ! ನಾನು ಮಾಡಿದ ಹಂಚಿಕೆಗಳೆಲ್ಲ ಗಾಳಿಯ ಗೋಪುರದಂತೆ, ನಿರರ್ಥಕವಾದವಲ್ಲ! ಅಮ್ಮನವರೇ, ಇನ್ನು ನೀವು ಬದು ಕಲಿಕ್ಕಿಲ್ಲವೇ?

(ಸಂಜೀವನೂ ಸುಶೀಲೆಯೂ ಒಳಗೆ ಬರುತ್ತಾರೆ.)

ಸಂಜೀವ:—ವಸಂತಾ, ಈಗ ಬಂದು ಏನು ಪ್ರಯೋಜನವು! ಸ್ವ ಲ್ಪ ದಿವಸಗಳಹಿಂದೆ ಬರಬಾರದಾಗಿತ್ತೇ!

ವಸಂತ:—ಯಾಕೆ! ಗಜರೆಯು ಬದುಕುವ ಹಾಗಿಲ್ಲೇನು?

ಸಂಜೀವ:—ಇನ್ನೇನು ಬದುಕ್ಯಾಳು! ನಿನ್ನನ್ನು ನೆನೆದು ನೆನೆದು ಕ್ಷೀಣಳಾಗಿ, ಈಗ ಅಂತ್ಯಾವಸ್ಥೆಗೆ ಬಂದಿರುವಳು.

ವಸಂತ:—ಅಯ್ಯೋ! ಕೈಗೆಬಂದತುತ್ತು ಬಾಯಿಗೆ ಬರಲಿಲ್ಲವಲ್ಲ! ಗಜರಾ, ನಿನ್ನ ಸಲುವಾಗಿ ಬೈರಾಗಿಯಾದೆನು. ಮನೆಮಾರುಬಿಟ್ಟು ಊರೂ ರು ತಿರುಗಹತ್ತಿದೆನು. ಕಡೆಗೆ ನಿನ್ನ ಭೆಟ್ಟಿಯಾಗಿ, ನಿನ್ನಕೂಡಾಡಿದ ಎರ ಡು ಮಾತುಗಳ ಹೊರ್ತು ನನಗೆ ಹೆಚ್ಚಿನ ಪುಣ್ಯವಿಲ್ಲವೇ! (ಅಳುತ್ತಾನೆ.)

ಸಂಜೀವ:—ಯಾರದೂ ಪುಣ್ಯವು ಉಳಿದಂತೆ ತೋರುವದಿಲ್ಲ. ಇವ ಳಿಗೆ ನೆಟ್ಟಗಾದಕೂಡಲೆ, ನಿನ್ನ ಕಡೆಗೆ ಕಳುಹಬೇಕೆಂದು ನನ್ನ ಮನಸಿ ನಲ್ಲಿತ್ತು. ಆದರೆ ಈ ಹತಭಾಗ್ಯಳಿಗೆ ಹುಟ್ಟಿದಂದಿನಿಂದ ದುಃಖವು ತಪ್ಪಿ ದಂತೆ ಕಾಣುವದಿಲ್ಲ. ದಿನಕ್ಕೊಂದು ರೀತಿಯಿಂದ ಬೇನೆಯು ಹೆಚ್ಚಾಗಿ ಕಡೆಗೆ ಈ ಅವಸ್ಥೆಯನ್ನು ಹೊಂದಿದಳು.

ವಸಂತ:—(ಅಳುತ್ತ) ಗಜರಾ, ನೀನು ಇನ್ನೇನು ಬದುಕುವಹಾಗೆ ತೋರುವದಿಲ್ಲ. ಹೋಗಿ ಬಾ. ಜೀವದಿಂದ ಇರುವವರೆಗೆ ನಿನಗೆ ಪರಿಪರಿ ಯ ದುಃಖಗಳನ್ನು ಅನುಭವಿಸಬೇಕಾಯಿತು. ಹೋಗುವ ಮುಂದಾದ

ರೂ ನಿನ್ನ ಇಚ್ಛೆಯು ಏನಿರುವದು ಹೇಳು. ಅದನ್ನು ಈ ಸೇವಕನು ಕೊನೆಗಾಣಿಸುವನು.

ಗಜರಾ:—ಪ್ರಾಣನಾಥರೇ, ಇಹಲೋಕದೊಳಗೆ ನನಗೆ ಯಾವ ಇಚ್ಛೆಯೂ ಇಲ್ಲ. ನನ್ನ ಸಲುವಾಗಿ ನೀವು ಅಳಬೇಡಿರಿ.

ವಸಂತ:—ಈ ಅಪರಾಧಿಯನ್ನು ಕ್ಷಮಿಸು. ನಿನ್ನ ಜನ್ಮವನ್ನೆಲ್ಲ ನಿರರ್ಥಕ ಮಾಡಿದೆನು. ( ಕೈಜೋಡಿಸುತ್ತಾನೆ )

ಗಜರಾ:—ಛೇ ! ಛೇ ! ನಿಮ್ಮದು ಏನೂ ತಪ್ಪಿಲ್ಲ. ನನ್ನ ಜನ್ಮವೆಲ್ಲ ನಿರರ್ಥಕವಾದರೂ ನಿಮ್ಮನ್ನು ನೋಡುತ್ತ ಸಾಯುವೆನಾದ್ದರಿಂದ ಅದು ಸಫಲವಾಯಿತು.

( ರಾಗ:–ಕಾಪಿ, ತಾಲ-ತ್ರಿವಟ. )

ಜನ್ಮ ಸಾರ್ಥಕವಾಯಿತು ಎನ್ನದು ಈ ॥ ಪಲ್ಲ ॥
ಪತಿಧ್ಯಾನದೊಳು ಕಾಲ ಕಳೆದಿಹ ।
ಪತಿಪಾದದೊಳು ಪ್ರಾಣ ಬಿಡುತಿಹ ॥ ೧ ॥
ಪೂರ್ವಾರ್ಜಿತಪುಣ್ಯದಿನಾನಿಂದಿಗೆ ।
ಆರ್ಯ ಮಹಿಳೆಯೆನಿಸಿಕೊಳ್ವೆ ಸಲೆ ॥ ೨ ॥
ಪರಮಾನಂದದಿ ಪತಿ ಪ್ರೇಮದೊಳು ।
ಪರಮೇಶ್ವರನ ಕೂಡಿಪೆ ಸ್ವರ್ಗದೊಳು ॥ ೩ ॥
ರಾಮ ರಾಮ ! ( ಸಾಯುತ್ತಾಳೆ. )

( ಎಲ್ಲರೂ ಅಳುತ್ತಾರೆ. )

ಹೀರಾ ಸುಶೀಲಾ:—ಅಮ್ಮಾ ಗಜರಾಬಾಯಿಯವರೇ ! ಎಲ್ಲಿ ಹೋದಿರಿ ! ಇದೇ ಈಗ ಚನ್ನಾಗಿ ಮಾತಾಡುತ್ತಿದ್ದಿರಲ್ಲ ! ( ಅಳುತ್ತಾರೆ )

ವಸಂತ:—ಗಜರಾ, ನನ್ನಕೂಡ ಮಾತಾಡುವದಿಲ್ಲವೇ ? ಏಳು ಮಾತಾಡು. ಹೀರೆಯು ಬಂದಿರುವಳು ನೋಡು. ಕಣ್ಣುತೆರೆ. ಇಕೋ, ಸಂಜೀವನು ನಿನ್ನನ್ನು ಕಾಣಬಂದಿರುವನು.

ಸಂಜೀವ:—ಇನ್ನೇನು ಕಣ್ಣು ತೆರೆದಾಳು ! ವಸಂತಾ, ಅಳಬೇಡ, ಅವಳನ್ನು ಬಿಟ್ಟು ಇತ್ತ ಬಾ,

ವಸಂತಃ—ಅವಳನ್ನು ನಾನು ಬಿಡುವದಿಲ್ಲ. ಗಜರಾ, ಎಲ್ಲಿ ಹೋದಿ! ನಿಲ್ಲು, ನಿಲ್ಲು, ನಾನೂ ಬರುವೆನು. ನಾನು ವಿಜಯನಗರಕ್ಕೆ ಹೋಗುವಾಗ, 'ನಾನೂ ಬರುವೆನು ಬಿಟ್ಟು ಹೋಗಬೇಡಿರಿ' ಎಂದು ನನ್ನನ್ನು ಬೇಡಿಕೊಂಡಿ. ಈಗ ನಾನು ನಿನ್ನನ್ನು ಬೇಡಿಕೊಳ್ಳುವೆನು. ಬಿಟ್ಟು ಹೋಗಬೇಡ. ನಾನೂ ನಿನ್ನಕೂಡ ಬರುವೆನು. ನಿಲ್ಲು, ನಿಲ್ಲು.

ಸಂಜೀವಃ—ಛೀ! ವಸಂತಾ ಗಂಡಸರು ಹಾಗೆ ಅಳಬಾರದು ಅವಳನ್ನುಬಿಟ್ಟು ನೀನು ಇತ್ತಬಾ.

ವಸಂತಃ—ಗಜರಾ, ಇಕೋ! ಇದು ಆಗುಹೆಯಲ್ಲಿ ನಿನಗೆ ಈ ಚಾಂಡಾಲನು ಕುಡಿಯಲು ಇಟ್ಟ ವಿಷದಬಟ್ಟಲವು. ನಿನಗೆ ವಿಷಕುಡಿಯ ಹೇಳಿದ ಅಪರಾಧಕ್ಕೇಂದು, ಇದನ್ನೇ ತಿರುಗಿ ನಾನೇ ಕುಡಿಯುವೆನು. (ಬಟ್ಟಲದೊಳಗೆ ನೀರುಹಾಕಿ ಕುಡಿಯುತ್ತಾನೆ. ಎಲ್ಲರೂ ಕಸಿದುಕೊಳ್ಳಲಿಕ್ಕೆ ಹೋಗುತ್ತಾರೆ) ಸಾಕು! ನಾನು ಮಾಡಿದ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ ವಾದಂತಾಯಿತು. ಪ್ರಿಯೇ, ಪರಲೋಕಕ್ಕೆ ನಾನೂ ಬರುವೇನು ಬಿಟ್ಟುಹೋಗಬೇಡ. ರಾಮ ರಾಮ! (ಸಾಯುತ್ತಾನೆ.)

(ಎಲ್ಲರೂ ಅಳುತ್ತಾರೆ]

ಹೀರಾಃ—ಅಯ್ಯೋ! ವಸಂತರಾಯರೂ ಹೋದರೇ!

ಸಂಜೀವಃ—ಹೀರಾ ಇದು ಎಂಥ ಅಪಘಾತವು! ಒಂದು ನಿಮಿಷದೊಳಗೆ ಎರಡು ಜೀವಗಳು ಹೋದವಲ್ಲ! ನನಗೆ ಯಾವ ವಿಚಾರವೂ ಹರಿಯಲೊಲ್ಲದು. ಹೀರಾ, ಇತ್ತಬಾ. ಈ ಸ್ಥಳವನ್ನು ಬಿಟ್ಟು ತುಸು ದೂರ ಕುಳಿತರೆ, ಕಣ್ಣುಗಳೊಳಗಿಂದ ನೀರಾದರೂ ಸ್ವಷ್ಟವಾಗಿ ಹೋದಾವು.

(ಎಲ್ಲರೂ ತುಸು ಮುಂದಕ್ಕೆ ಬರುತ್ತಾರೆ)

ಹೀರಾಃ—ಸಂಜೀವರಾಯರೆ, ನೀವು ಊರಿಗೆ ಬಂದಾಗ 'ಗಜರಾಬಾಯಿಗೆ ತುಸು ಜಡ್ಡು ಆಗಿತ್ತು. ಈಗ ನೆಟ್ಟಗಾಗಿರುವಳು, ಎಂದು ನನಗೆ ಹೇಳಿದಿರಿ. ಈಗ ಒಮ್ಮೆಲೇ ಹೀಗೆ ಯಾಕೆ ಆಯಿತು?

ಸಂಜೀವಃ—ಹೀರಾ, ಅದನ್ನೆಲ್ಲ ಹೇಳಬೇಕಾದರೆ, ದುಃಖವು ತುಂಬಿ ಬರುವದು. ಆದರೆ ಎಲ್ಲವೂ ಒಮ್ಮೆ ಹೊರಬಿದ್ದು ಹೋಗಲಿ. ಹೇಳುವೆನು ಕೇಳು. ನಾನು ಇಲ್ಲಿಗೆ ಬಂದ ದಿವಸ, ವಸಂತನು ಸತ್ತನೆಂದು ಗಜರೆಗೆ ಒಂದು ಪತ್ರ ಬಂದಿತ್ತು.

ಹೀರಾಃ—ಅಯ್ಯಯ್ಯೋ! ಹಾಗೆ ಯಾರು ಬರೆದಿದ್ದಾರು?

ಸಂಜೀವಃ—ಇಕೋ! ಆ ಪತ್ರವು ಇಲ್ಲಿಯೇ ಇರುವದು. ಇದರೊಳಗೆ ಪತ್ರ ಬರೆದವನ ಹೆಸರಿಲ್ಲ. ( ಪತ್ರವನ್ನು ತೋರಿಸುತ್ತಾನೆ )

ಹೀರಾ:—ಇವು ಮನೋಹರನ ಅಕ್ಷರಗಳು. ಮುಂದೇನಾಯಿತು?

ಸಂಜೀವಃ—ಪತ್ರವನ್ನು ಓದಿ ಒಮ್ಮೆಲೇ ಮೂರ್ಛೆ ಹೊಂದಿದಳು. ಅಂದಿನಿಂದ ಹಾಸಿಗೆ ಹಿಡಿದವಳು, ನಿನ್ನಿನವರೆಗೆ ಒಂದೇಸವನೆ ಕ್ಷೀಣಳಾಗ ಹತ್ತಿದಳು. ನಿನ್ನೆ ಪುನಃ ಮತ್ತೊಂದು ಪತ್ರವು ಬಂದಿತು. ಕಡೆಗೆ ಅದೇ ಅವಳ ಪ್ರಾಣವನ್ನು ತಕ್ಕೊಂಡಿತು.

ಹೀರಾಃ—ಆ ಪತ್ರದಲ್ಲಿ ಏನು ಬರೆದಿತ್ತು?

ಸಂಜೀವಃ—ನನಗೂ ಗೊತ್ತಿಲ್ಲ. ಆ ಪತ್ರವನ್ನು ಅವಳು ನನಗೆ ತೋರಿಸಲೇ ಇಲ್ಲ. ಇನ್ನೇನು? ಇನ್ನು ಯಾರುಬೇಡನ್ನುವರು? ಸುಶೀಲಾ, ಆ ಪತ್ರವು ಎಲ್ಲಿರುವದು? ಹೋಗು. ತಕ್ಕೊಂಡು ಬಾ. ನೋಡೋಣ.

ಸುಶೀಲಾ:—( ಹೋಗಿ ಪತ್ರವನ್ನುತಂದು ) ಇದೇ ಆ ಪತ್ರವು.

(ಸಂಜೀವನೂ ಹೀರೆಯೂ ಇಬ್ಬರೂಕೂಡಿ ಮನಸಿನಲ್ಲಿಪತ್ರವನ್ನು ಓದುತ್ತಾರೆ.)

ಹೀರಾಃ—ಹೌದು ಈ ಎರಡೂ ಪತ್ರಗಳನ್ನು ಮನೋಹರನೇ ಬರೆದಿರಲಿಕ್ಕೆಬೇಕು.

ಸಂಜೀವಃ—ಹೀರಾ, ಯಾವನೇ ಬರೆಯಲಿ, ಈ ಪತ್ರಗಳು ಎರಡು ಜೀವಗಳನ್ನು ಮಾತ್ರ ತಕ್ಕೊಂಡವು. ಆದರೆ ನನಗೊಂದು ಗೂಢ ಬಿದ್ದಿರುವದುಃ—ಮನೋಹರನಿಗೆ ಗಜರೆಯು ಇಲ್ಲಿರುವದು! ಹ್ಯಾಗೆ ಗೊತ್ತಾಯಿತು?

ಹೀರಾಃ—ಓಹೋ! ಈಗ ನೆನಪಾಯಿತು. ಸಂಜೀವರಾಯರೇ, ಕೇಶು ಬಗೆಯುವದು ಬಲು ಸುಲಭ. ಅಂಥ ದುಷ್ಟರ ಹಂಚಿಕೆಗಳು, ಮೊದಲು ಯಾರಿಗೆ ತಿಳಿದಾವು.

ಸಂಜೀವಃ—ನೀನು ಏನೋ ನೆನಪಾಯಿತಂದಿ. ಅದು ಏನು?

ಹೀರಾಃ—ನೀವು ಇಲ್ಲಿಗೆ ಹೊರಡುವದಕ್ಕಿಂತ ಮೊದಲು ಒಂದು ದಿವಸ' ನಾನೂ ನನ್ನ ನೆರೆಹೊರೆಯ ಹೆಂಗಸರೂ ಕೂಡಿ, ನದಿಗೆ ಒಗೆಯು

ಲಿಕ್ಕೆ ಹೋಗಿದ್ದೆವು. ಆಗ ಮಾತ್ರ ಮನೋಹರನು, ನಮ್ಮ ಹೆನ್ನುಹತ್ತಿ ಬಂದು, ಗಿಡದ ಮರೆಗೆ ಕುಳಿತುಕೊಂಡನು. ಮಾತಿಗೆ ಮಾತು ಬೆಳೆದು ಆ ಮೂವರು ಹೆಂಗಸರು. ನೀವು ಅಲ್ಲಿಗೆ ಬಂದಸುದ್ದಿಯನ್ನೂ, ಅವಂತಿಕೆಯುಕೂಡ ವಸಂತರಾಯರ ಮದುವೆಯ ಸುದ್ದಿಯನ್ನೂ. ನೀವು ಅವಳಿಗೆ, 'ವಸಂತರಾಯನನ್ನು ಮದುವೆಮಾಡಿಕೊಂಡರೆ, ನೀನೊಬ್ಬಳಿಗೆ ಸವತಿಯಾಗಬೇಕಾಗುವದು' ಎಂದು ಹೇಳಿದ ಮಾತನ್ನೂ, ಹೊರಗೆಡವಿದರು. ಇವನ್ನೆಲ್ಲ ಮನೋಹರನು ಕೇಳಿಕೊಂಡು, ಗಜರೆಯು ಪ್ರಯಾಗದಲ್ಲಿಯೇ ಇರಲಿಕ್ಕೆಬೇಕೆಂದು, ತರ್ಕಿಸಿರಬಹುದು, ಇದನ್ನೇ ನನ್ನ ಕಡೆಯಿಂದ ಪುನಃ ತಿಳಿದುಕೊಳ್ಳಲಿಕ್ಕೋ ಏನೋ, ಹೋಗುವಾಗ, ನನ್ನನ್ನು ಬಲು ಆಗ್ರಹದಿಂದ ಕರೆದನು. ನಾನು ತಿರುಗಿ ಸಹನೋಡದೆ, ಹಾಗೇ ಮನೆಗೆ ಬಂದೆನು. ಇದೊಂದು ರೀತಿಯಿಂದ ಮಾತ್ರ ಅವನಿಗೆ 'ಗಜರೆಯು ಇಲ್ಲಿರುವಳು—ಇನ್ನೇಲ್ಲಿರುವಳು! ಇಲ್ಲಿದ್ದಳೆಂದು ಗೊತ್ತಾಗಿರಬಹುದು.

ಸಂಜೀವಃ—ಅಯ್ಯೋ! ಅವನಿಗೆ ಹೀಗೆ ಗೊತ್ತಾಗಲಿಕ್ಕೆ ನಾನೇ ಕಾರಣವಾದೆನಲ್ಲ! ನಾನು ನನ್ನ ತಂಗಿಗೆ ಹಾಗೆ ಯಾಕೆ ಹೇಳಿದ್ದೇನು! ಗಜರಾ, ನಿನಗೆ ವಿಜಯ ವಿಠ್ಠಲನ ಗುಡಿಯಮುಂದೆ ಕೊಟ್ಟ ವಚನವನ್ನು ನಾನು ಮುರಿದಂತಾಯಿತು. ಅಯ್ಯೋ! ಅದಕ್ಕಾಗಿಯೇ ಈ ಎರಡು ಜೀವನಗಳು ಹೋದವು. ಹೀರಾ, ನಾನೇ ಇವರಿಬ್ಬರನ್ನು ಕೊಂದಂತಾಯಿತು. ತಿಳಿಯದೆ ನನ್ನಿಂದ ಎಂಥ ದೊಡ್ಡ ತಪ್ಪಾಯಿತಲ್ಲ! ನಡಿ; ಸುಶೀಲೇ ಹೋಗು. (ಕೀಲೀಕೈ ಸರವನ್ನು ಒಗೆಯುತ್ತಾನೆ. ಸುಶೀಲೆಯು ತಕ್ಕೊಂಡು ಹೋಗುತ್ತಾಳೆ) ಛೇ! ಇನ್ನು ನಾನು ನನ್ನ ಪ್ರಾಣಗಳನ್ನು ಇಡಲಾರೆನು (ಹೋಗುತ್ತಾನೆ)

ಹೀರಾ:—ನಾನಾದರೂ ಇಡಲಾರೆನು. (ಹೋಗುತ್ತಾಳೆ)



# ಶುದ್ಧೀಪತ್ರ.



| ಪುಟ. | ಸಾಲು. | ಅಶುದ್ಧ | ಶುದ್ಧ. |
|---|---|---|---|
| ೧ | ೬ | ನಿವಾಕರ | ನಿವಾರಕ |
| ,, | ೨೨ | ಅಪ್ರಸಿದ್ದ | ಅಪ್ರಸಿದ್ಧ |
| ೨ | ೧೭ | ವೈತ್ರೆಯಾ | ಮೈತ್ರೇಯಾ |
| ,, | ೨೩-೨೪ | ಕಮಲಮಧುರ | ಕಲಮಧುರ |
| ೩ | ೨೬ | ಬ್ರಮೆಗೆ | ಭ್ರಮೆಗೆ |
| ೫ | ೪ | ನಿಮ | ನಿಮ್ಮ |
| ,, | ಕಡೆಯಸಾಲು | ಭಾ | ಬಾ |
| ೬ | ೧೯ | ದುಃಬ | ದುಃಖ |
| ,, | ೨೫ | ವಿಜಯೇ | ವಿಜಯ |
| ,, | ,, | ಪ್ರಿತಿ | ಪ್ರೀತಿ |
| ೭ | ೧೪ | ಅವರನು | ಅವರನ್ನು |
| ೮ | ೫ | ಮಾತನು | ಮಾತನ್ನು |
| ೯ | ೧ | ಇನೂ | ಇನ್ನೂ |
| ,, | ೧೧ | ದಿವರ | ದಿವಸ |
| ,, | ೧೪ | ಮುಲಕೆ; ಯೆಂಬ | ಮುಲಕೆಯೆಂಬ |
| ೧೦ | ೧೭ | ಇಳದು | ಇಳಿದು |
| ,, | ೧೮ | ವೈವಸ್ಥೆ | ವ್ಯವಸ್ಥೆ |
| ೧೧ | ೨ | Camale | Camel |
| ,, | ೧೦ | ಇಲ್ಲ | ಇಲ್ಲಿ |
| ,, | ೧೧ | ವಾರಾಗಬೇಕೊ | ಪಾರಾಗಬೇಕೋ |
| ೧೨ | ೮ | ಕಥೆ | ಕಥೆ |
| ೧೩ | ೫ | ಪ್ರಾಣೇಶಾ | ಪ್ರಾಣೇಶಾ |
| ೧೬ | ೧ | ದುಷ್ಕೃತ್ಯ | ದುಷ್ಕೃತ್ಯ |
| ೧೮ | ೨ | ಅಸ್ವಸ್ಥಿತೆ | ಅಸ್ವಸ್ಥತೆ |
| ,, | ೧೨ | Comiug | Coming |
| ೨೦ | ೨೮ | ಭಟ್ಟಿ | ಭೆಟ್ಟಿ |

| ಪುಟ. | ಸಾಲು. | ಅಶುದ್ಧ. | ಶುದ್ಧ |
|---|---|---|---|
| ೭೯ | ೭ | ಮಾತೆಯು | ಮಾಯೆಯು |
| ೮೦ | ೯ | ಆಳುವಿಯೇಕೆ | ಅಳುವಿಯೇಕೆ |
| ೮೧ | ೨೦ | ಒಳ್ಳಿದು | ಒಳ್ಳೇದು |
| ೮೩ | ೧೦ | ಅವಳಿಗೆ | ಅವಳಿಗೇ |
| ೮೭ | ೧೬ | ಆವಳ | ಅವಳ |
| ೯೫ | ೨೪ | ಇನ್ನು | ಇನ್ನೂ |
| ೯೬ | ೧೧ | ಹೀರಾ | ಹೀರಾ ( ತನ್ನಪ್ಪ |
| ೯೮ | ೫ | ,, | ,, |
| ೯೮ | ಕಡೆಯಸಾಲು | ಬೇಕಾಯಿಸು | ಬೇಕಾಯಿತು |
| ೧೦೦ | ,, | ಬಂದು | ಒಂದು |

